

# ಚಂದಮಾಮ

ಮೇ 1986

★

## ಈ ಸಂಚಿಕೆಯಲ್ಲಿ



★


ಬಿಡಿ ಪ್ರತಿ ರೂ. ೨-೫೦
ವಾರ್ಷಿಕ ಚಂದಾ ರೂ. ೩೦.೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಒಂದು ಕಡೆಯಲ್ಲಿ ಕಳ್ಳತನವಾದರೆ ಅನೇಕರ ಮೇಲೆ ಸಂದೇಹ ಬಂದು, ದುಡುಕುತನದಿಂದ ಅವರೇ ಕಳ್ಳರೆಂಬಂತೆ ವಿಚಾರಣೆ ನಡೆಸಿದರೆ ಅನರ್ಥವೆದ್ದುಬಿಡುತ್ತದೆ. ಅಂತಲೇ ಅಪರಾಧ ಸಂಶೋಧನೆ ಎಂಬುದು ಪ್ರಾಚೀನ ಕಾಲದಿಂದಲೂ ದೊಡ್ಡದೊಂದು ಪ್ರತ್ಯೇಕ ಕಲೆಯಾಗಿ ನಡೆದುಬಂದಿದೆ. ಅದಕ್ಕೆ ಮಾನಸ ಶಾಸ್ತ್ರಜ್ಞಾನ ಬೇಕು. ಮನಸ್ಸಿನ ತತ್ವವರಿಯುವ ತಾರ್ಕಿಕ ದೃಷ್ಟಿಯುಳ್ಳವರಿಂದಷ್ಟೇ ಅದು ಸಾಧ್ಯವಾಗುತ್ತದೆನ್ನಲು ಈ ಸಂಚಿಕೆಯಲ್ಲಿ "ಕಳ್ಳನ ಪತ್ತೆ" ಎಂಬ ಕಥೆಯೊಂದಿದೆ.

## ಅಮರವಾಣಿ

ವಿಜ್ಞಃ ಸ್ವಂ ಮನ್ಯತೇಽಜ್ಞ ಮಜ್ಞೋ ವರ್ತೇತ ವಿಜ್ಞವತ್
ಮೂಕೀಭಾವಂ ವಹನ್ ಪ್ರಾಜ್ಞಃ ಪುರುಷೋತ್ತಮೋತ್ತಮಃ
ವಿದ್ಯಾವಂತನು ತಾನು ತಿಳಿಯದವನೆಂದೂ, ವಿದ್ಯೆಯಿಲ್ಲದವನು ತಾನು ಎಲ್ಲವನ್ನೂ ತಿಳಿದವನೆಂದೂ ಹೇಳಿಕೊಳ್ಳುತ್ತಾರೆ. ಏನೂ ಹೇಳದೆ ಮೌನವಾಗಿರುವವನು ಉತ್ತಮೋತ್ತಮನು.

ಸಂಪುಟ : ೭೬ ಮೇ '೮೬ ಸಂಚಿಕೆ : ೫

ಬಿಡಿ ಪ್ರತಿ ರೂ. ೨-೫೦ : : ವಾರ್ಷಿಕ ಚಂದಾ ರೂ. ೩೦-೦೦



**ಪುರಾಣ ಗಾಥಾವಳಿ :**

# ಅರಿಷ್ಟನೇಮಿ

ಒಂದಾನೊಂದು ಕಾಲದಲ್ಲಿ ಒಬ್ಬ ರಾಜನು ಬೇಟೆಗೆ ಹೋದನು. ಅಡವಿಯಲ್ಲಿ ಎಷ್ಟು ಹೊತ್ತು ತಿರುಗಿದರೂ ಒಂದೇ ಒಂದು ಪ್ರಾಣಿಯೂ ರಾಜನ ಕಣ್ಣಿಗೆ ಬೀಳಲಿಲ್ಲ. ಕಡೆಗೆ ಬೆಟ್ಟದ ಕೆಳಗೆ ಎರಡು ಪೊದರುಗಳ ಮಧ್ಯದಲ್ಲಿ ಒಂದು ಜಿಂಕೆ ಹೋಗುವುದನ್ನು ರಾಜನು ನೋಡಿದನು. ಕೂಡಲೇ ರಾಜನು ಅದರ ಮೇಲೆ ಬಾಣ ಬಿಟ್ಟನು. ಆ ಪೆಟ್ಟಿಗೆ ಮಾನವ ಕಂಠದಿಂದ "ಅಯ್ಯೋ!" ಎಂದು ಆರ್ತನಾದವು ಕೇಳಿದ ಕೂಡಲೇ ರಾಜನು ಆಶ್ಚರ್ಯದಿಂದ ಅಲ್ಲಿಗೆ ಓಡಿದನು. ಅಲ್ಲಿ ಜಿಂಕೆಯ ಚರ್ಮ ಕಟ್ಟಿಕೊಂಡ ಒಬ್ಬ ಮುನಿಕುಮಾರನು ಬಾಣದ ಪೆಟ್ಟಿಗೆ ಸತ್ತು ಬಿದ್ದುದನ್ನು ನೋಡಿ ದಿಗ್ಭ್ರಾಂತನಾದನು ರಾಜ.

ತಾನು ಮಾಡಿದ ಅಪರಾಧವು ಹೊರ ಬೀಳುವುದಕ್ಕೆ ಮೊದಲೇ ಅಲ್ಲಿಂದ ಓಡಿ ಹೋಗುವುದು ಶ್ರೇಯಸ್ಕರವೆಂದು ಒಂದುಕ್ಷಣ ಅವನಿಗೆ ತೋರಿತು. ಆದರೆ ಮರುಕ್ಷಣದಲ್ಲಿ ಆ ಹುಡುಗನ ತಂದೆ ತಾಯಿಯರ ಹತ್ತಿರ ಹೋಗಿ ಕ್ಷಮಾಪಣೆ ಕೇಳಿಕೊಳ್ಳಬೇಕೆಂದು ನಿಶ್ಚಯಿಸಿಕೊಂಡು ಸುತ್ತುಮುತ್ತಲೂ ಹುಡುಕುತ್ತಾ ಅಲೆದನು. ಒಂದು ತೊರೆಯ ಸಮೀಪದಲ್ಲಿ ಕುಟೀರವಿರುವುದನ್ನು ನೋಡಿ ಅಲ್ಲಿಗೆ ಹೋಗಿ, ಕುಟೀರದೊಳಗಿನಿಂದ ಹೊರಗೆ ಬರುತ್ತಿದ್ದ ಅರಿಷ್ಟನೇಮಿ ಎಂಬ ಮುನಿಗೆ ನಮಸ್ಕಾರ ಮಾಡಿ, "ಸ್ವಾಮಿ, ಜಿಂಕೆಯ ಚರ್ಮ ಕಟ್ಟಿಕೊಂಡ ಮುನಿಕುಮಾರನು ಯಾರಾದರೂ ಆ ಗುಡ್ಡದ ಕಡೆಗೆ ಬಂದರೊ ?" ಎಂದು ಕೇಳಿದನು.

"ಹೌದು. ನನ್ನ ಕುಮಾರನೇ ದರ್ಭೆಗಳಿಗಾಗಿ ಆ ಕಡೆಗೆ ಹೋದನು" ಎಂದನು ಅರಿಷ್ಟನೇಮಿ ಮುನಿ. ಆಗಲೇ ದರ್ಭೆಯ ಕಟ್ಟುಗಳನ್ನು ಕೈಯಲ್ಲಿ ಹಿಡಿದುಕೊಂಡು ಮುನಿಕುಮಾರನೂ ಅಲ್ಲಿಗೆ ಬಂದನು.

ಅವನನ್ನು ನೋಡಿದ ರಾಜನಿಗೆ ಆಶ್ಚರ್ಯದಿಂದ ಮಾತೇ ಹೊರಡಲಿಲ್ಲ. ಸ್ವಲ್ಪ ಹೊತ್ತಿಗೆ ಅರಿವಿಗೆ ಬಂದು, "ಜಿಂಕೆ ಎಂದು ತಪ್ಪಾಗಿ ನಿಮ್ಮ ಕುಮಾರನನ್ನು ಬಾಣದಿಂದ ಹೊಡೆದೆನು. ಬಾಣದ ಪೆಟ್ಟಿಗೆ ಅವನು ಸತ್ತು ಬಿದ್ದುದನ್ನು ನನ್ನ ಕಣ್ಣಿನಿಂದ ನೋಡಿದೆ. ಅವನೇ ಈಗ ಹೀಗೆ ಸಜೀವಿಯಾಗಿ ಬರುವುದನ್ನು ನೋಡಿ ನಂಬಲಾಗದಿದ್ದೇನೆ" ಎಂದನು ರಾಜ.

"ಹೌದಪ್ಪಾ, ನನ್ನ ಮಗನನ್ನು ನೀನು ಬಾಣದಿಂದ ಹೊಡೆದದ್ದು ನಿಜವೇ. ಆದರೆ ನಮ್ಮ ಪ್ರಾಣಗಳು ಭಗವದರ್ಪಣವಾಗಿವೆ. ಇಂತಹ ಪೆಟ್ಟುಗಳು ನಮಗೆ ಯಾವ ಹಾನಿಯನ್ನೂ ಮಾಡುವುದಿಲ್ಲ" ಎಂದನು ಅರಿಷ್ಟನೇಮಿ ಮುಗುಳು ನಗುತ್ತಾ.





# ಯೋಗ್ಯತಾ ಪರೀಕ್ಷೆ

ಒಂದು ಊರಿನಲ್ಲಿ ರಮಾಪತಿ ಎಂಬ ಗೃಹಸ್ಥನಿಗೆ ಸುವರ್ಚಲೆಯೊಬ್ಬಳೇ ಮಗಳು. ಇವಳು ತನ್ನ ಚಿಕ್ಕತನದಲ್ಲಿಯೇ ತಾಯಿಯನ್ನು ಕಳೆದುಕೊಂಡು ಬಿಟ್ಟಿದ್ದಳು. ಅಂತಲೇ ತಾಯಿಯಿಲ್ಲದ ತಬ್ಬಲಿ ಮಗಳನ್ನು ರಮಾಪತಿ ಅತ್ಯಂತ ಅಕ್ಕರೆಯಿಂದ ಬೆಳೆಯಿಸಿದ್ದನು. ಈಗ ಸುವರ್ಚಲೆ ದೊಡ್ಡವಳಾಗಿ ಮದುವೆಗೆ ನಿಂತಿದ್ದಳು. ರಮಾಪತಿ ವರಾನ್ವೇಷಣೆಗೆ ತೊಡಗಿದ್ದನು.

ಒಂದು ದಿನ ನೆರೆಯೂರಿನಲ್ಲಿರುವ ರಮಾಪತಿಯ ಬಾಲ್ಯ ಮಿತ್ರನಿಂದ, ಒಂದು ಸಾರಿ ಬಂದು ಹೋಗಬೇಕೆಂದು ಸಮಾಚಾರ ಬಂತು. ಒಂದು ಮುಖ್ಯ ಸಂಗತಿ ಮಾತಾಡಬೇಕೆಂದೂ, ತನ್ನ ಆರೋಗ್ಯ ಸರಿಯಿಲ್ಲದ್ದರಿಂದ ಬರಲಾಗುವುದಿಲ್ಲವೆಂದೂ ತಿಳಿಸಿದ್ದನು. ಆದ್ದರಿಂದ ರಮಾಪತಿ ಬೆಳಿಗ್ಗೆ ಹೋಗಿ ರಾತ್ರಿಯಾಗುವುದರೊಳಗೆ ಬರಬಹುದೆಂದು ಹೊರಟನು. ಹೊರಡುವಾಗ ಬಾಗಿಲು ಭದ್ರಪಡಿಸಿಕೊಂಡು ಎಚ್ಚರಿಕೆಯಲ್ಲಿರುವಂತೆ ಮಗಳಿಗೆ ಹೇಳಿದನು. ಆಗ ಆಕಾಶದ ಪರಿಸ್ಥಿತಿಯನ್ನು ನೋಡಿ, "ಮಧ್ಯಾಹ್ನದ ಮೇಲೆ ಮಳೆ ಬರುತ್ತೋ ಏನೋ ? ಒಂದು ವೇಳೆ ನಾನು ಬರುವಾಗ ರಾತ್ರಿಯಾದರೂ ಹೆದರಬೇಡ. ಬಾಗಿಲು ಹಾಕಿ ಭದ್ರವಾಗಿ ತಾಳ ಹಾಕಿಕೋ" ಎಂದನು.

"ನೀವೇನೂ ಚಿಂತಿಸಬೇಡಿ ಅಪ್ಪಾ. ನಾನು ಇನ್ನೂ ಸಣ್ಣ ಮಗು ಅಂದುಕೊಂಡಿರಾ ? ನೀವು ಹೋಗಿ ಕೆಲಸ ಮುಗಿಸಿ ನಿಧಾನವಾಗಿ ನಾಳೆಯೇ ಬನ್ನಿರಿ. ನನ್ನ ವಿಷಯ ಹೆದರಲೇ ಬೇಡಿ" ಎಂದು ಹೇಳಿ ಕಳುಹಿಸಿಕೊಟ್ಟಳು.

ರಾತ್ರಿಯಾಯಿತು. ತಂದೆ ಬರುವುದು ಕಾಣಲಿಲ್ಲ. ಸುವರ್ಚಲೆ ಬಾಗಿಲು ಹಾಕಿಕೊಂಡು ಮಲಗಿದರೂ ಸರಿಯಾಗಿ ನಿದ್ದೆ ಬರಲಿಲ್ಲ. ಆಗಾಗ ಮಳೆಯ ಶಬ್ದ. ಸುಮಾರು ಮಧ್ಯ ರಾತ್ರಿಯಾದಾಗ, ಹೊರ ಬಾಗಿಲನ್ನು ಯಾರೋ ಗಟ್ಟಿಯಾಗಿ ತಟ್ಟುವ ಶಬ್ದ ಕೇಳಿಸಿತು. ತಂದೆಯೇ ಬಂದರೆಂದು ಕೊಂಡು ಸುವರ್ಚಲೆ ಬಾಗಿಲ ಪಕ್ಕದಲ್ಲಿದ್ದ ಕಿಟಕಿಯ ಬಾಗಿಲು ತೆರೆದು ಹೊರಗೆ ಹಣಿಕಿ ನೋಡಿದಳು. ಆಗ ಹೊರಗೆ ಹನಿಹನಿಯಾಗಿ ಮಳೆ ಬರುತ್ತಿದ್ದಿತು. ಮಳೆಯಲ್ಲಿ ನೆನೆದ ಮುದುಕನೊಬ್ಬನು ಬಾಗಿಲ ಹತ್ತಿರ ನಿಂತಿದ್ದನು.

ಎಂ. ಕೆ. ಈಶ್ವರರಾವ್



ಆ ಮುದುಕನಿಗೆ ಕಿಟಕಿ ಬಾಗಿಲು ತೆರೆದುದು ಗೊತ್ತಾಗಿ, ಆ ಕಡೆಗೆ ತಿರುಗಿ "ಈ ರಾತ್ರಿಯಲ್ಲಿ ಬಿದ್ದುಕೊಳ್ಳಲಿಕ್ಕೆ ಸ್ವಲ್ಪ ಜಾಗ ಕೊಟ್ಟು ಪುಣ್ಯ ಕಟ್ಟಿಕೊಳ್ಳುವಿರಾ ? ತಿಳಿಯದ ಊರಿಗೆ ಬಂದಿದ್ದೇನೆ. ಮುಂದೆ ನಡೆಯಲಾರೆ. ಮಳೆ ಬೇರೆ. ಶರೀರಕ್ಕೆ ಸೌಖ್ಯವೂ ಇಲ್ಲ" ಎಂದನು ದೀನಸ್ವರದಲ್ಲಿ.

ಸುವರ್ಚಲೆಗೆ ಅವನ ಮೇಲೆ ಕನಿಕರ ಬಂದುದರಿಂದ ಬಾಗಿಲು ತೆರೆದು, "ಒಳಗೆ ಬನ್ನಿ ತಾತಾ" ಎಂದು ಕರೆದು ದೀಪ ದೊಡ್ಡದು ಮಾಡಿದಳು.

ಮುದುಕನು ಒಳಗೆ ಬಂದನು. ಅವಳು ಅವನಿಗೆ ಒಣ ಬಟ್ಟೆ ಕೊಟ್ಟಳು. ಮೈ ತಲೆ ಒರೆಸಿಕೊಳ್ಳಲು ಒಂದು ಬೈರಾಸನ್ನೂ ಕೊಟ್ಟಳು. ಅವನು ಮೈ ಒರೆಸಿಕೊಂಡು, ಒಣ ಬಟ್ಟೆ ಉಟ್ಟು ಸುತ್ತಲೂ ನೋಡಿ, "ಈ ರಾತ್ರಿಯ ಹೊತ್ತಿನಲ್ಲಿ ಮನೆಯಲ್ಲಿ ನೀನೊಬ್ಬಳೇ ಇರುವಿಯಾ ಅಮ್ಮಾ ?" ಎಂದು ಕೇಳಿದನು.

ಸುವರ್ಚಲೆ ತನ್ನ ತಂದೆ ನೆರೆಯ ಊರಿಗೆ ಹೋಗಿರುವುದನ್ನು ಹೇಳಿ, "ದಾಕ್ಷಿಣ್ಯ ಮಾಡಬೇಡಿ ತಾತಾ. ಊಟ ಮಾಡುವಿರಾದರೆ ಹೇಳಿರಿ" ಎಂದಳು.

ಅವನು ತಲೆಬಗ್ಗಿಸಿ ಮೆಲ್ಲನಿಯಿಂದ, "ಇವತ್ತು ಊಟವೇ ಮಾಡಿಲ್ಲ. ಇಲ್ಲದಿದ್ದರೂ ಪರವಾಗಿಲ್ಲ" ಎಂದನು.

"ಊಟ ಉಳಿದಿದೆ, ಬನ್ನಿ ಕೂಡಿ" ಎಂದು ಸುವರ್ಚಲೆ, ತಾನು ಉಂಡು ಉಳಿದಿದ್ದ ಅನ್ನ ಪಲ್ಯ ಹುಳಿಗಳನ್ನು ಅವನಿಗೆ ಬಡಿಸಿದಳು. ಮುದುಕನು ತೃಪ್ತಿಯಾಗಿ ಉಂಡನು.

ಸುವರ್ಚಲೆ ಮುಂದಿನ ಕೋಣೆಯಲ್ಲಿ ಚಾಪೆ ಬಿಡಿಸಿ ಮುದುಕನಿಗೆ ಮಲಗಲು ತಯಾರು ಮಾಡುತ್ತಿರಲು, ಥಕ್ಕನೆ ಅವಳ ಕುತ್ತಿಗೆಯ ಮೇಲೆ ಏನೋ ಬಿದ್ದುದರಿಂದ ಅವಳು ತಲೆ ಎತ್ತಿ ನೋಡಿದಳು. ಮುದುಕನು ಅವಳ ಕುತ್ತಿಗೆಯ ಹತ್ತಿರ ಹದನಾಗಿ ಹೊಳೆಯುವ ಕತ್ತಿಯನ್ನು ತೋರಿಸಿ, "ಮಾತಾಡದೆ ಒಳ್ಳೇದರಲ್ಲಿ ಮನೆಯೊಳಗಿರುವ ನಗಗಳು ನಾಣ್ಯಗಳು ಗಂಟುಕಟ್ಟಿ ತಂದಿಡು. ಏನಾದರೂ ಸಾಹಸ ಮಾಡಲು ನೋಡಿದರೆ ನಿನ್ನ ಪ್ರಾಣ ತೆಗೆಯುತ್ತೇನೆ" ಎಂದನು ಕಣ್ಣು ತಿರುಗಿಸುತ್ತಾ.

ಸ್ವಲ್ಪವೂ ಇದಿರು ನೋಡದ ಈ ಪರಿಣಾಮದಿಂದ ಸುವರ್ಚಲೆ ಗಾಬರಿಬಿದ್ದು, ಎರಡು ಹೆಜ್ಜೆ ಹಿಂದೆ ನಿಂತು, ಧೈರ್ಯ ತಂದುಕೊಂಡು "ಆಶ್ರಯ ಕೊಟ್ಟವರಿಗೇ ದ್ರೋಹ ಮಾಡುವುದೇ? ಮನುಷ್ಯನೇ ಆದ ಕಳ್ಳನಿಗೆ ಕೃತಜ್ಞತೆ ಇಲ್ಲದೆ ಹೋಗದು' ಅಂತ ಕೇಳಿದ್ದೇನೆ. ನಿಜಕ್ಕೂ ಹಸಿವಾದ್ದರಿಂದ ತಾನೇ ಉಂಡದ್ದು ?" ಎಂದಳು ತನಗೆ ತಾನೇ ಹೇಳಿಕೊಳ್ಳುವಂತೆ.

ಮುದುಕನು ಮುಖ ಸಿಂಡರಿಸಿ, "ಇದೊಂದು ಬಹು ದೊಡ್ಡ ಆಶ್ರಯವೇನು ? ಬಾಗಿಲು ತೆರೆಯ

ದಿದ್ದರೆ ಒಡೆದು ಒಳಗೆ ನುಗ್ಗುತ್ತಿದ್ದೆ. ಊಟ ಮಾಡಿದ ರೇನು, ಕದ್ದರೇನು ? ಎಲ್ಲಾ ಒಂದೇ. ಹೊಟ್ಟೆಗಾಗಿಯೇ ! ಹಾಳು ಹರಟೆ ಬೇಡ. ಮೊದಲು ನಾನು ಹೇಳಿದ ಹಾಗೆ ಮಾಡು. ಎಲ್ಲಾ ಮೂಟೆ ಕಟ್ಟಿ ತಾ " ಎಂದನು.

" ಊಟ ಹಾಕಿ ಉಪಚಾರ ಮಾಡಿದ್ದೇ ದೊಡ್ಡ ತಪ್ಪಾಯಿತು. ಇನ್ನು ನಾನಾಗಿ ಏನೂ ಕೊಡಲಾರೆ. ಕೊಂದರೆ ಕೊಲ್ಲು. ಹಣವೇ ನಿನಗೆ ಬೇಕಾದರೆ ಅಕೋ ಆ ಕೋಣೆಯಲ್ಲಿರುವ ಪೆಟ್ಟಿಗೆಯಲ್ಲಿ ನಿನಗೆ ಬೇಕಾದ್ದೆಲ್ಲಾ ಇದ್ದುದನ್ನು ನೀನೇ ಕಟ್ಟಿಕೊಂಡು ಹೋಗು " ಎಂದಳು ಕೋಪದಿಂದ.



ಮುದುಕನು ಕೂಡಲೇ ಅವಳು ತೋರಿಸಿದ ಕೋಣೆಯೊಳಗೆ ಹೋದನು. ಸುವರ್ಚಲೆ ಮಿಂಚಿನ ವೇಗದಲ್ಲಿ ಹಿಂದೆಯೇ ಹೋಗಿ ಆ ಕೋಣೆಯ ಬಾಗಿಲು ಎಳೆದು ಚಿಲಕ ಸಿಕ್ಕಿಸಿಬಿಟ್ಟಳು. ಮುದುಕನು ಒಂದೆರಡು ಸಾರಿ ಬಾಗಿಲೆಳೆದು, ಕೂಗಿ ಹೆದರಿಸುತ್ತ ಬಾಗಿಲನ್ನು ಬಡಿಯತೊಡಗಿದನು.

ಈ ನಡುರಾತ್ರಿಯಲ್ಲಿ ಈ ಮುದುಕನನ್ನು ಹಿಡಿಯಲು ನೆರೆಹೊರೆಯವರಿಗೆಲ್ಲ ನಿದ್ರಾಭಂಗ ಮಾಡುವುದೇಕೆಂದುಕೊಂಡು ಸುವರ್ಚಲೆ, ತನ್ನ ಕೋಣೆಗೆ ಹೋಗಿ ಮಲಗಿದಳು. ಬೆಳಗಾದ ಮೇಲೆ ಮುದುಕನ ಸಮಾಚಾರವನ್ನು ನೋಡೋಣವೆಂದು ಕೊಂಡಳು.

ಬೆಳಂಜಾವದ ಹೊತ್ತಿನಲ್ಲಿ ಮತ್ತೆ ಹೊರಬಾಗಿಲು ತಟ್ಟುವ ಶಬ್ದ ಕೇಳಿಸಿತು. ಸುವರ್ಚಲೆ ಎಚ್ಚರಕ್ಕೆ ಬಂದು, ತನ್ನ ತಂದೆ ಬಂದುಬಿಟ್ಟರೆಂದುಕೊಳ್ಳುತ್ತ ಹೋಗಿ ಬಾಗಿಲು ತೆರೆದಳು. ಬೆಲೆಬಾಳುವ ಬಟ್ಟೆಗಳನ್ನು ಧರಿಸಿದ್ದ ನಾಜೂಕಾದ ಯುವಕನೊಬ್ಬನು ಹೊರಗೆ ನಿಂತಿದ್ದನು.

ಸುವರ್ಚಲೆ ಅವನನ್ನು ನೋಡಿ, " ಯಾರು ಬೇಕು ? ಯಾರು ನೀವು ? " ಎಂದು ಕೇಳಿದಳು.

ಯುವಕನು ಮುಗುಳು ನಗುತ್ತ " ಮಳೆಯಲ್ಲಿ ನೆನೆದ ಮುದುಕನೊಬ್ಬನು ನಿಮ್ಮ ಮನೆಯಲ್ಲಿ ಆಶ್ರಯ ಕೇಳಿ ಬಂದನೇನು ? ". ಎಂದು ಕೇಳಿದನು.

" ಹೌದು, ಬಂದನು. ಆಶ್ರಯ ಕೊಟ್ಟು ಒಂದಿಷ್ಟು ಊಟ ಹಾಕಿದೆ. ನನಗೇ ಕತ್ತಿ ತೋರಿಸಿ ಇರುವುದನ್ನೆಲ್ಲಾ ಕೊಡು ಅಂತ ಹೆದರಿಸಿದ. ಆತನನ್ನು ಆ ಪಕ್ಕದ ಕೋಣೆಯಲ್ಲಿ ಸೇರಿಸಿ ಬಾಗಿಲು ಚಿಲಕ ಹಾಕಿಟ್ಟಿದ್ದೇನೆ. ಇದು ನಿಮಗೆ ಹೇಗೆ ತಿಳಿಯಿತು ? ಆ ಕಳ್ಳ ಮುದುಕನೊಂದಿಗೆ ನಿಮಗೇನು ಕೆಲಸ ? " ಎಂದು ಕೇಳಿದಳು ಸುವರ್ಚಲೆ.

ಯುವಕನು ಗಟ್ಟಿಯಾಗಿ ನಕ್ಕು, " ಅವನು ಕಳ್ಳನಲ್ಲ. ನಮ್ಮ ಮನೆಯ ಕೆಲಸದ ಆಳು " ಎಂದನು.

" ನಿಮ್ಮ ಮನೆಯ ಕೆಲಸದವನು ನಮ್ಮ ಮನೆಗೆ ಕಳ್ಳತನಕ್ಕೆ ಬಂದರೆ ಅವನು ಕಳ್ಳನಲ್ಲದೆ ಮತ್ತೇನಾಗುತ್ತಾನೆ ? " ಎಂದಳು ಸುವರ್ಚಲೆ ಕೋಪದಿಂದ. ಸುವರ್ಚಲೆಯ ಕೋಪದಿಂದ ಆ ಯುವಕನಿ



ಗೇನೂ ಆಗದೆ, ನಗುತ್ತಲೇ "ಅವನು ನಿಜಕ್ಕೂ ಕಳ್ಳತನ ಮಾಡಲು ಬಂದವನಲ್ಲಾ ಅನ್ನುತ್ತೇನೆ. ಇದೆಲ್ಲಾ ಒಂದು ಸಣ್ಣ ನಾಟಕ ಅಷ್ಟೇ" ಎಂದು ಅವಳಿಗೆ ನಿಜ ಸಂಗತಿಯನ್ನು ವಿವರಿಸಿದನು.

ಆ ಯುವಕನ ಹೆಸರು ಮೋಹನರಂಗ. ಒಂದು ವಾರದ ಕೆಳಗೆ ಸ್ನೇಹಿತನ ಮನೆಯ ವಿವಾಹಕ್ಕೆ ಆ ಊರಿಗೆ ಬಂದ ಮೋಹನರಂಗನು, ಅದೇ ಮದುವೆಗೆ ಬಂದಿದ್ದ ಸುವರ್ಚಲೆಯನ್ನು ನೋಡಿ, ಅವಳ ಅಂದ ಚಂದ, ಮಾತುಗಳಿಗೆ ಆಕರ್ಷಿತನಾದನು. ಆದರೆ ಲಕ್ಷಾಧಿಕಾರಿಯ ಒಬ್ಬನೇ ಮಗನಾದ ಅವನನ್ನು ಮದುವೆಯಾಗುವ ಯೋಗ್ಯತೆ ಅವಳಿಗಿದೆಯೋ ಎಂಬುದನ್ನು ಪರೀಕ್ಷಿಸಬೇಕೆಂದು ಅವನಿಗೆ ತೋರಿತು. ಹೀಗೆ ಅವಳ ಯೋಗ್ಯತಾ ಪರೀಕ್ಷೆಗಾಗಿ ಅವಳು ಯಾರು ಏನೆಂಬುದನ್ನೆಲ್ಲಾ ಅರಿತು, ತಂದೆ ಮನೆಯಲ್ಲಿಲ್ಲದ ಹೊತ್ತು ನೋಡಿ ತಮ್ಮ ಕೆಲಸದಾಳಿನ ಮೂಲಕ ಈ ನಾಟಕ ಆಡಿಸಿದ್ದಾನೆ ಮೋಹನರಂಗ.

ಅದನ್ನೆಲ್ಲಾ ಕೇಳಿ ಆಶ್ಚರ್ಯಪಡುತ್ತಿದ್ದ ಸುವರ್ಚಲೆಯನ್ನು ನೋಡಿ. "ಈಗ ಈ ನನ್ನ ಯೋಗ್ಯತಾ ಪರೀಕ್ಷೆಯಲ್ಲಿ ನೀನು ನೂರಕ್ಕೆ ನೂರು ಗೆದ್ದಿರುವಿ!" ಎಂದನು.

"ಅದು ಹೇಗೆ?" ಎಂದು ಸುವರ್ಚಲೆ ತನ್ನ ಕೋಪವನ್ನು ತಡೆದುಕೊಂಡು ಕೇಳಿದಳು.

ಅದಕ್ಕೆ ಯುವಕನು ರಂಗಸ್ಥಳದ ನಟನ ಹಾಗೆ ಹಾವಭಾವ ತೋರಿಸುತ್ತ, "ಮುದುಕನನ್ನು ಆದರಿಸುವುದರ ಮೂಲಕ ನಿನ್ನ ದಯೆ. ಉದಾರತೆ, ವಾತ್ಸಲ್ಯಗಳೂ, ಕತ್ತಿ ನೋಡಿದಾಗ ಹೆದರದೆ ನಿಂತುದರಿಂದ ನಿನ್ನ ಧೈರ್ಯವೂ, ಅವನನ್ನು ಬಂಧಿಸುವುದರಲ್ಲಿ ನಿನ್ನ ಚುರುಕು ಚಾತುರ್ಯವೂ ಚೆನ್ನಾಗಿ ನಿರೂಪಣವಾಗಿವೆ, ನನ್ನ ಅರ್ಧಾಂಗಿನಿಯಾಗಿ ಬಾಳ ಸಂಗಾತಿಯಾಗುವ ಯೋಗ್ಯತೆ ನಿನಗಿದೆ. ಇನ್ನು ನಿನ್ನನ್ನು ಮದುವೆ ಮಾಡಿಕೊಳ್ಳಲು ನನಗೆ ಯಾವ ಅಭ್ಯಂತರವೂ ಇಲ್ಲ" ಎಂದನು.

"ನಿಮ್ಮ ಕೆಲಸದಾಳಿನ ಮೂಲಕ ಇಂತಹ ನಾಟಕ ಆಡಿಸಿದ ನೀವು ಸ್ವತಹಾ ನಾಟಕವಾಡಿದರೆ ಲಕ್ಷ ಲಕ್ಷ ಸಂಪಾದಿಸಬಹುದು" ಎಂದು ಸುವರ್ಚಲೆ ಒಳಗೆ ಹೋಗಿ ಮುದುಕನಿರುವ ಕೋಣೆಯ ಬಾಗಿಲು ತೆರೆದಳು. ಅವನು ಕಣ್ಣುಜ್ಜಿಕೊಳ್ಳುತ್ತಾ ಹೊರಗೆ ಬಂದು, ತನ್ನ ಯಜಮಾನನ ಹಿಂದೆ ಹೋಗಿ ನಿಂತನು.

ಆಗ ಸುವರ್ಚಲೆ ಯುವಕನೊಂದಿಗೆ, "ಮೋಹನರಂಗರೇ, ನೀವು ನನ್ನನ್ನು ಯೋಗ್ಯತಾ ಪರೀಕ್ಷೆ ಮಾಡಿ ಫಲಿತ ನಿರ್ಣಯಿಸುವುದೆಲ್ಲಾ ಬುದ್ಧಿವಂತಿಕೆಯಲ್ಲ. ಈಗ ಕೇಳಿರಿ, ಇಂತಹ ಹುಚ್ಚು ಪರೀಕ್ಷೆ ಮಾಡಿದ ನಿಮ್ಮನ್ನು ಕೋತ್ವಾಲನ ವಶಕ್ಕೆ ಒಪ್ಪಿಸದೆ ಬಿಟ್ಟುಬಿಡುವ ನನ್ನ ಉದಾರತನ, ಲಕ್ಷಾಧಿಕಾರಿಯಾದ ನೀವು ಈ ಕ್ಷಣವೇ ಹೊರಟುಹೋಗದಿದ್ದರೆ ನಿಮ್ಮ ಮರ್ಯಾದೆ ದಕ್ಕದೆನ್ನುವ ನನ್ನ ಧೈರ್ಯ, ನಿಮ್ಮನ್ನು ಎಷ್ಟು ಮಾತ್ರಕ್ಕೂ ಮದುವೆಯಾಗುವುದಿಲ್ಲವೆನ್ನುವ ನನ್ನ ಬುದ್ಧಿಯನ್ನು ಲೆಕ್ಕಕ್ಕೆ ತಂದು

ಕೊಳ್ಳಿ, ಪರೀಕ್ಷೆ ಇಡಲಿಕ್ಕಾದರೂ ಯೋಗ್ಯತೆ ಇರಬೇಕೆಂದು ಅರಿತುಕೊಳ್ಳಿ! ಹುಂ. ಇನ್ನು ಹೋಗಿ ಬಿಡಿ ದಯಮಾಡಿ!" ಎಂದು ಕೋಪದಿಂದ ಬೀದಿಗೆ ಕೈ ತೋರಿಸಿದಳು.

ಅವಳು ಹೇಳಿದ ಮಾತುಗಳನ್ನು ಕೇಳಿ, ಯಜಮಾನನೂ, ಕೆಲಸದಾಳೂ ಏನೂ ತೋರದೆ ತಲೆಗಳನ್ನು ತಗ್ಗಿಸಿಕೊಂಡು, ಆಗಲೇ ಮನೆಗೆ ಬಂದು ಬಾಗಿಲ ಹತ್ತಿರ ನಿಂತಿದ್ದ ಸುವರ್ಚಲೆಯ ತಂದೆಯನ್ನು ಒಳಗೆ ಹೋಗಲು ಬಿಟ್ಟು ಬದಿಗೆ ಸರಿದು ಅಲ್ಲಿ ನಿಲ್ಲದೆ ಹೊರಟುಹೋದರು.

ಮಗಳು ಹೇಳಿದ ಮಾತುಗಳನ್ನು ಕೇಳಿ ಒಳಗೆ ಬಂದ ರಮಾಪತಿ, ಮಗಳ ತಲೆಯನ್ನು ತಡವುತ್ತ, "ನೀನೊಬ್ಬಳೇ ಇರುವೆ ಎಂದುಕೊಂಡು ರಾತ್ರಿ ಮೂರನೇ ಜಾಮ ದಾಟಿದ ಕೂಡಲೇ ಹೊರಟು ಬಿಟ್ಟೆ. ಇಲ್ಲಿ ಹೊಸ ದೃಶ್ಯ. ಆದರೂ ಹೀಗೆ ದುಡುಕಿ ಮಾತಾಡಿದಿಯೇಕಮ್ಮಾ? ಅಂತಹ ದೊಡ್ಡತನದವರು ತಾವಾಗಿ ಕೇಳಲು ಬಂದರೆ ಹೀಗೆಲ್ಲಾ ಬಯ್ಯುವುದುಂಟೆ?" ಎಂದನು.

"ಅಪ್ಪಾ, ಅವರಿಗೆ ಹಣವಿರುವುದೆಂಬ ಅಹಂಕಾರದಲ್ಲಿ ಅವರ ಇಷ್ಟವೇ ಮುಖ್ಯವಾಗಿ ಕಾಣುತ್ತದೆಯೋ ಹೊರತು, ನನ್ನ ಇಷ್ಟದ ಗೊಡವೆಯೇ ಬೇಡವೆಂದುಕೊಂಡಿದ್ದಾರೆ. ನಾನು ಹಿಡಿಸಿದುದಕ್ಕೆ ಪರೀಕ್ಷೆ ಇಟ್ಟರಂತೆ. ಆ ಬಗೆಯ ಮನುಷ್ಯರು ಹಣದಿಂದ ಏನನ್ನಾದರೂ ಕೊಂಡುಕೊಳ್ಳಬಹುದು ಅಂತಲೇ ಆಲೋಚಿಸುತ್ತಾರೆ" ಎಂದಳು ಸುವರ್ಚಲೆ.

ರಮಾಪತಿ ಸ್ವಲ್ಪಹೊತ್ತು ಆಲೋಚಿಸಿ, "ನನ್ನ ಚಿಕ್ಕಂದಿನ ಸ್ನೇಹಿತ ರಾಮಭದ್ರಯ್ಯ, ಆತನ ಮಗ ಪ್ರಭಾಕರ ನಿನಗೆ ಗೊತ್ತು ತಾನೆ?" ಎಂದು ಕೇಳಿದನು.

"ಗೊತ್ತಿದೆ. ಯಾಕೆ?" ಎಂದಳು ಸುವರ್ಚಲೆ.

"ಕಾಲು ಹುಣ್ಣಿನಿಂದ ನಡೆಯಲಾಗದೆ, ಅವನೇ ನನ್ನನ್ನು ಕರೆಸಿಕೊಂಡದ್ದು. ಆ ರಾಮಭದ್ರಯ್ಯ ನಿನ್ನನ್ನು ತನ್ನ ಮನೆಗೆ ಸೊಸೆಯಾಗಿ ತಂದುಕೊಳ್ಳಬೇಕೆಂದಿದ್ದಾನೆ. ಇದಕ್ಕೆ ನಿನ್ನ ಅಭಿಪ್ರಾಯ ತಿಳಿದುಕೊಳ್ಳಬೇಕೆಂದು ಅವನ ಅಪೇಕ್ಷೆ. ಪ್ರಭಾಕರ ಒಳ್ಳೆಯ ಗುಣಗಳಿರುವ ಯೋಗ್ಯ ಹುಡುಗ. ಕಷ್ಟಜೀವಿ. ಇರುವ ನಾಲ್ಕು ಎಕರೆ ಹೊಲಗಳಲ್ಲಿ ಬಂಗಾರದಂತಹ ಬೆಳೆ ತೆಗೆಯುತ್ತಾನೆ. ಅವನನ್ನು ಮಾಡಿಕೊಳ್ಳುವುದಕ್ಕೆ ನಿನಗೆ ಇಷ್ಟವೆ?" ಎಂದು ಕೇಳಿದನು ರಮಾಪತಿ.

ಇಷ್ಟವೇ ಎಂಬಂತೆ ಸುವರ್ಚಲೆ ಮುಗುಳುನಗುವಿನೊಂದಿಗೆ ತಲೆಯಾಡಿಸಿದಳು. ತನ್ನ ಬಾಲ್ಯಸ್ನೇಹಿತನು ಸಂಬಂಧಿಕನಾಗುವನೆಂದು ರಮಾಪತಿಗೆ ಸಂತೋಷವಾಯಿತು.






# ಭಿಕ್ಷುಕನ ಬಡತನ

ಹಿಂದೆ ಸಿಂಧೂರ ದೇಶದಲ್ಲಿ ಸುಗುಣಸೇನನೆಂಬ ರಾಜನು ಆಳಿಕೊಂಡಿದ್ದನು. ಅವನ ಆಳ್ವಿಕೆಯನ್ನು ಪ್ರಜೆಗಳು ಅವನ ತಂದೆ, ತಾತಂದಿರ ಆಳ್ವಿಕೆಗೆ ಹೋಲಿಸುತ್ತ, ಸ್ವಲ್ಪಕಾಲದವರೆಗೆ ಮಾತಾಡಿಕೊಳ್ಳುವುದುಂಟು. ಹಾಗೆ ನಗರದ ಪ್ರಮುಖರೂ ಆಸ್ಥಾನದ ಪಂಡಿತರೂ ತಂದೆ ತಾತಂದಿರಿಗಿಂತ ಸುಗುಣಸೇನನ ಪರಿಪಾಲನೆಯೇ ಮೇಲಾದುದೆಂದು ಹೊಗಳುತ್ತಿದ್ದರು.

ಒಂದು ದಿನ ರಾಜನೊಂದಿಗೆ ಮಂತ್ರಿ ಮಾರ್ತಾಂಡ ವರ್ಮನು, "ಮಹಾರಾಜರೇ, ತಮ್ಮ ಪರಿಪಾಲನೆಯನ್ನು ಕುರಿತು ಎಷ್ಟೋ ಪ್ರಮುಖರೂ, ಆಶ್ರಿತರೂ ಮೆಚ್ಚಿಕೊಳ್ಳುತ್ತಿದ್ದಾರೆ. ಒಂದುವೇಳೆ ಅದೆಲ್ಲ ಕೇವಲ ಬಹಿರಂಗದ ಸ್ತುತಿ ವಾಕ್ಯಗಳಾದರೂ ಆಗಿರಬಹುದಷ್ಟೆ? ಆದುದರಿಂದ, ಒಂದುಸಾರಿ ನಾವು ವೇಷ ಬದಲಾಯಿಸಿಕೊಂಡು ಸಾಮಾನ್ಯ ಪ್ರಜೆಗಳ ನಡುವಿನಲ್ಲಿ ತಿರುಗಾಡಿ ಬರಬೇಕು. ಸ್ವತಃ ಜನತೆಯ ನಿಜವಾದ ಅಭಿಪ್ರಾಯ ತಿಳಿಯುವುದು ಒಳ್ಳೆಯದೇ ಅಲ್ಲವೆ?" ಎಂದು ಸಲಹೆ ಮಾಡಿದನು.

ಅದು ಒಳ್ಳೆಯದೆಂದು ಸುಗುಣಸೇನನಿಗೂ ತೋರಿತು. ಮರುದಿನ ರಾಜನೂ ಮಂತ್ರಿಯೂ ಯಾರೋ ಪರವೂರಿನ ಹೊಸಬರಂತೆ ಮಾರುವೇಷ ಧರಿಸಿಕೊಂಡು ತಮ್ಮ ನಗರದಿಂದ ಇನ್ನೊಂದು ನಗರಕ್ಕೆ ಹೊರಟರು.

ಅಲ್ಲಿ ಅವರಿಬ್ಬರೂ ಒಂದು ಬೀದಿಯಲ್ಲಿ ನಡೆಯುತ್ತಿರುವಾಗ ಭಿಕ್ಷುಕನೊಬ್ಬನು ಕಂಡುಬಂದನು. ಮಂತ್ರಿ ರಾಜನಿಗೆ ಆ ಭಿಕ್ಷುಕನನ್ನು ತೋರಿಸಿ, "ಮಹಾರಾಜರೇ ಇವನನ್ನು ಮಾತಾಡಿಸಿ ಇವನ ಬಾಯಿಯಿಂದ ಏನು ಬರುವುದೋ ನೋಡೋಣ. ತಮ್ಮ ಪರಿಪಾಲನೆಯನ್ನು ಕುರಿತು ಇವನ ಅಭಿಪ್ರಾಯ ಹೇಗಿದೆಯೋ ನೋಡಿಬಿಡುವಾ" ಎಂದನು.

ಸುಗುಣಸೇನನು ತಲೆದೂಗಿ, ಆ ಭಿಕ್ಷುಕನನ್ನು ನೋಡಿ, "ಅಲ್ಲಯ್ಯಾ, ಒಂದು ಮಾತು. ನೀನೇಕೆ ಹೀಗೆ ಬೀದಿ ಬೀದಿ ಅಲೆಯುತ್ತಾ ಭಿಕ್ಷೆ ಬೇಡುತ್ತೀ?" ಎಂದು ಕೇಳಿದನು.

ಆ ಪ್ರಶ್ನೆಯನ್ನು ಕೇಳಿ ಭಿಕ್ಷುಕನು ಬಹಳ ನಿರ್ಲಕ್ಷ್ಯ ಭಾವದಿಂದ, "ಅದೇನು ಕೇಳೋದು? ಭಿಕ್ಷೆ ಏಕೆ ಬೇಡುವುದೆಂದರೆ ಏನು ಅರ್ಥ? ಎಲ್ಲರಿಗೂ ಅರ್ಥ ಗೊತ್ತೇ ಇರುತ್ತದೆ. ಇಪ್ಪತ್ತೈದು

ಜೆ. ಜೆ. ರತ್ನ

ವರ್ಷಗಳಿಂದ ಭಿಕ್ಷೆ ಬೇಡುತ್ತಿದ್ದೇನೆ. ಯಾರೂ ಹೀಗೆ ಕೇಳಿದ್ದಿಲ್ಲ" ಎಂದನು.



ಅವನ ಮಾತಿನಿಂದ ರಾಜನು ಸಂತೃಪ್ತನಾದಂತೆ ಮಂತ್ರಿಯೊಂದಿಗೆ, "ಇವನು ನಮ್ಮ ತಾತನ ಕಾಲದಿಂದಲೂ ಭಿಕ್ಷುಕನೇ" ಎಂದನು.

ಆ ಮಾತು ಭಿಕ್ಷುಕನ ಕಿವಿಗೂ ಬಿತ್ತು. ಕೂಡಲೇ ಬೇಸರದಿಂದ, "ಅಯ್ಯಾ, ನಿಮ್ಮ ತಾತ ಯಾರೋ ನಾನರಿಯೆನು. ಆದರೆ ಇಪ್ಪತ್ತೈದು ವರ್ಷಗಳಿಂದ ನಾನು ಈ ವೃತ್ತಿಯಲ್ಲಿದ್ದರೂ ನಿಜವಾದ ಭಿಕ್ಷುಕನ ಅನುಭವ ಹೇಗಿದೆ ಎಂಬುದು ತಿಳಿಯುವುದು ಇತ್ತೀಚಿನ ಕಾಲದಲ್ಲಿಯೇ! ಹಿಂದಿನ ಕಾಲ ಹೀಗಿರಲಿಲ್ಲಪ್ಪ!" ಎಂದನು.

"ಅದೆಂಥ ನಿಜವಾದ ಅನುಭವ?" ಎಂದು ರಾಜನು ಕೇಳಿದನು.

"ಕೇಳಿದಿರೀ ಅಂತ ಹೇಳುತ್ತೇನೆ. ಏನೋ ಹುಚ್ಚು ಗಾಳೀ ಮಾತು ಅಂತ ಹಾರಿಸುವ ಮಾತಲ್ಲ. ವ್ಯತ್ಯಾಸ ತಿಳೀರಿ. ಇಪ್ಪತ್ತು ವರ್ಷಗಳ ಹಿಂದೆ ದಿನಾ ಒಂದು ಗಂಟೆ ಹೊತ್ತು ಭಿಕ್ಷೆ ಬೇಡಿದರೆ ಜೋಳಿಗೆ ತುಂಬುವುದು ಮಾತ್ರವೇ ಅಲ್ಲ, ಐದಾರು ತಾಮ್ರದ ಕಾಸುಗಳು ಕೂಡಾ ಸಿಗುತ್ತಿದ್ದುವು. ಬರುತ್ತಾ, ಬರುತ್ತಾ ಅಷ್ಟು ಸಿಕ್ಕಲು ಎರಡು ಮೂರು ದಿನಗಳಾಗುತ್ತಾ ಬಂದವು. ಈಗ ಅಂದರೆ ಇತ್ತೀಚಿನ ದಿನಗಳಲ್ಲಿ ಒಂದು ವಾರದವರೆಗೆ ಎಲ್ಲಾ ಬೀದಿಗಳಲ್ಲಿ ತಿರುಗಿದರೂ ಜೋಳಿಗೆ ಅರ್ಧ ಕೂಡಾ ತುಂಬುವುದಿಲ್ಲ. ದುಡ್ಡು ದುಗ್ಗಾಣಿ ಬೀಸುವವರಂತೂ ಇಲ್ಲವೇ ಇಲ್ಲ" ಎಂದು ಹೇಳಿ ಬಿಕ್ಷುಕನು ತನ್ನ ದಾರಿ ಹಿಡಿದು ಹೋಗಿಬಿಟ್ಟನು.

ರಾಜನು ಸ್ವಲ್ಪ ಹೊತ್ತು ಆಲೋಚಿಸುತ್ತಾ ಸುಮ್ಮನಿದ್ದು, ಆಮೇಲೆ ಮಂತ್ರಿಯೊಂದಿಗೆ, "ಈ ಭಿಕ್ಷುಕ ಹೇಳಿದ್ದನ್ನು ಕೇಳಿದ ಮೇಲೆ, ನಮ್ಮ ಪ್ರಜೆಗಳಲ್ಲಿ ಧರ್ಮ ಚಿಂತನೆ, ಉಪಕಾರ ಬುದ್ಧಿ, ದಯೆ ಮುಂತಾದ ಒಳ್ಳೇ ಗುಣಗಳು ಕುಂಠಿಸಿಕೊಂಡು ಬರುವ ಹಾಗೆ ಕಾಣುತ್ತದೆ. ಅಲ್ಲವೆ?" ಎಂದನು.

ಅದಕ್ಕೆ ಮಂತ್ರಿ, "ಮಹಾರಾಜಾ, ಭಿಕ್ಷುಕನು ಹೇಳಿದುದು ಪ್ರಜೆಗಳಲ್ಲಿ ಒಳ್ಳೆಯ ಗುಣಗಳು ಕಡಿಮೆಯಾಯಿತೆಂದು ತಿಳಿಯಪಡಿಸುವ ಉದ್ದೇಶದಂತೆ ಕಾಣುವುದಿಲ್ಲ. ಈ ಇಪ್ಪತ್ತೈದು ವರ್ಷಗಳಲ್ಲಿ ತಾನು ಎಷ್ಟು ಬಡವನಾಗುತ್ತಾ ಬರುತ್ತಿದ್ದೇನೆಂದು ಹೇಳುವುದೇ ಅವನ ಉದ್ದೇಶವೆಂದು ಕಾಣುತ್ತದೆ" ಎಂದನು.

ಮಂತ್ರಿಯ ಮಾತು ಕೇಳಿ ಸುಗುಣಸೇನ ರಾಜನು ಆಶ್ಚರ್ಯಪಡುತ್ತ, "ಹಾಗಂದರೇನು? ಭಿಕ್ಷುಕನು ಬಡವನಾಗುತ್ತಾ ಬರುವುದೆಂದರೆ ಏನು ಅರ್ಥ?" ಎಂದನು.

"ಮಹಾರಾಜರೇ, ಆ ಭಿಕ್ಷುಕನು ನಿಮ್ಮ ತಾತನವರ ಕಾಲದಲ್ಲಿ ಎಷ್ಟು ಲಾಭದಾಯಕವಾಗಿ

ಬದುಕಿದೆನೆಂದು ಹೇಳಿದ್ದಾನಷ್ಟೆ ? ಕ್ರಮವಾಗಿ ಅವನ ಆದಾಯವು ಹೇಗೆ ತಗ್ಗುತ್ತಾ ಬಂತೆಂತಲೂ ವಿವರಿಸಿದ್ದಾನೆ. ಅಷ್ಟೇ ಅಲ್ಲದೆ ಇತ್ತೀಚೆಗೆ ತನ್ನ ಪರಿಸ್ಥಿತಿ ಹೇಗೆ ಅಧೋಗತಿಗೆ ಬಂದಿದೆ ಎಂದಿರುವಾಗ ಅವನು ಬಡವನಾದನೆಂದೇ ಆಯಿತಲ್ಲ ? " ಎಂದನು ಮಂತ್ರಿ.

" ಹೌದು. ಆದ್ದರಿಂದಲೇ ಪ್ರಜೆಗಳಲ್ಲಿ ನೈತಿಕ ಗುಣಗಳು ಕಡಿಮೆಯಾಗುತ್ತಾ ಬಂತು ಅಂದೆನು. ಅದರಲ್ಲೇನು ತಪ್ಪಾಗಿದೆ ? " ಎಂದು ಆಶ್ಚರ್ಯದಿಂದ ಕೇಳಿದನು ರಾಜ.

" ಮಹಾರಾಜರು ಕ್ಷಮಿಸಬೇಕು. ಅದಕ್ಕೆ ತಕ್ಕ ಸಾಕ್ಷ್ಯಾಧಾರಗಳೇನೂ ಇಲ್ಲ. ತಾವು ಭಾವಿಸುವಂತೆ ನಡೆದಿದ್ದರೆ ಇಷ್ಟು ಹೊತ್ತಿಗೆ ರಾಜ್ಯದೊಳಗೆ ಎಲ್ಲಿ ನೋಡಿದರೂ ಮೋಸಗಳೂ, ಕೊಳ್ಳೆ, ಕೊಲೆ, ಕಳ್ಳತನಗಳೂ ನಡೆದಿರಬೇಕಿತ್ತು. ಆದರೆ ರಾಜ್ಯದಲ್ಲಿ ಎಲ್ಲಿಯೂ ಅಂತಹ ಅರಾಜಕತೆ ಕಾಣುವುದಿಲ್ಲ " ಎಂದನು ಮಂತ್ರಿ.

" ಹಾಗಾದರೆ ಭಿಕ್ಷುಕನ ಈಗಿನ ದುಸ್ಥಿತಿಗೆ ಯಾರು ಕಾರಣವೆಂದು ನಿಮ್ಮ ಅಭಿಪ್ರಾಯ ? " ಎಂದು ಕೇಳಿದನು ರಾಜ.

" ಅದಕ್ಕೆ ಕಾರಣ ಈ ಇಪ್ಪತ್ತೈದು ವರ್ಷಗಳಲ್ಲಿ ಪ್ರಜೆಗಳ ಆರ್ಥಿಕ ಪರಿಸ್ಥಿತಿ ಕ್ರಮವಾಗಿ ಇಳಿಯುತ್ತಾ ಬಂದುದೇ ಎಂದು ನನ್ನ ಅಭಿಪ್ರಾಯ. ಆದರೂ ಪ್ರಜೆಗಳು ಬಹಳ ಸಹನೆಯಿಂದ ಪರಿಸ್ಥಿತಿ ಒಳ್ಳೆಯದಾಗುತ್ತದೆಂದು ನಿರೀಕ್ಷಿಸಿಕೊಂಡಿರುತ್ತಾರೆ. ಆ ಭಿಕ್ಷುಕನ ಬಡತನವು, ಪ್ರಜೆಗಳ ಬಡತನವನ್ನು ಕಾಲಬದ್ಧವಾಗಿ ಸೂಚಿಸುತ್ತದೆಂದು ನನಗೆ ತೋರುತ್ತದೆ. ಸಹನೆಯಿಂದ ನಿರೀಕ್ಷಿಸುವ ಪ್ರಜೆಗಳ ಮನಸ್ಸು, ಸಹನೆಯ ಎಲ್ಲೆ ಮೀರಿಹೋಗದಂತೆ ನಾವು ಜಾಗರೂಗರಾಗಬೇಕಾಗಿದೆ " ಎಂದನು ಮಂತ್ರಿ.

ಈ ವಿವರಣೆಯನ್ನು ಕೇಳಿದ ಮೇಲೆ ಸುಗುಣಸೇನ ರಾಜನಿಗೆ ದೇಶದ ಪರಿಸ್ಥಿತಿ ಅರ್ಥವಾಯಿತು.

ರಾಜಧಾನೀ ನಗರದೊಳಗಿನ ಪ್ರಮುಖರೂ ಪಂಡಿತರೂ ಹೇಳುವಂತಹ ಮುಖಸ್ತುತಿಗಳನ್ನು ಕೇಳುತ್ತ, ಪರಿಪಾಲನೆಯಲ್ಲಿ ನಾನು ಅಲಕ್ಷ್ಯ ತೋರಿಸಿರುವುದನ್ನು ರಾಜನು ಅರಿತುಕೊಂಡು, ಒಪ್ಪಿಕೊಂಡಂತೆ ತಲೆಯಾಡಿಸಿದನು.

ಹೀಗೆಯೇ ಸುಗುಣಸೇನನು ಮಂತ್ರಿಯೊಂದಿಗೆ ರಾಜ್ಯದೊಳಗೆಲ್ಲಾ ಪರ್ಯಟನೆ ಮಾಡಿದನು. ಆಗ ಪ್ರಜೆಗಳ ಅಗತ್ಯಗಳು ಏನೇನು ಎಂಬುದೆಲ್ಲಾ ಗೊತ್ತಾಯಿತು.

ಅದಕ್ಕೆ ಬೇಕಾದ ಕೆಲಸಗಳನ್ನು ಮಾಡಿಸುತ್ತ, ಒಳ್ಳೆಯ ಸಮರ್ಥನಾದ ರಾಜನೆಂದು ಕೀರ್ತಿ ಪಡೆದನು ಸುಗುಣಸೇನ ರಾಜ.






## ೧೮

[ ಶಿವಪುರದ ಸರಹದ್ದಿನಲ್ಲಿ ಚಂದ್ರವರ್ಮನೂ ಸೇನಾನಿ ಧೀರಮಲ್ಲನೂ ಕೂಡಿ ತಮ್ಮ ಸೇನೆಗಳೊಂದಿಗೆ, ಸರ್ಪಕೇತುವನ್ನು ಒಂದಾನೊಂದು ಗುಡ್ಡಗಳ ಇಕ್ಕಟ್ಟು ಪ್ರದೇಶದಲ್ಲಿ ಇದಿರಿಸಿದರು. ಆ ಯುದ್ಧದಲ್ಲಿ ಸರ್ಪಕೇತುವಿನ ಪಕ್ಷದ ಅನೇಕರು ಚಂದ್ರವರ್ಮನ ಕಡೆಗೆ ತಿರುಗಿದರು. ಸರ್ಪಕೇತು ಉಳಿದವರೊಂದಿಗೆ ತಪ್ಪಿಸಿಕೊಂಡು ಓಡಲು, ಅವನ ಬೆಂಬತ್ತುವಂತೆ ಕೆಲವರು ಭಟರನ್ನು ಕಳುಹಿಸಿದನು ಚಂದ್ರವರ್ಮ. — ಇನ್ನು ಓದಿರಿ ]

ಆ ಸಮಯದಲ್ಲಿ ಸೂರ್ಯನೂ, ಅವನ ಹಿಂದಿದ್ದ ಪ್ರಕಾಶವೂ ಪೂರ್ತಿ ಮುಳುಗಿಹೋಗಿಯಾಗಿತ್ತು. ಸರ್ಪಕೇತುವಿನ ಜಾಡು ತಿಳಿಯಲು ಕಳುಹಿಸಲ್ಪಟ್ಟ ಭಟರಲ್ಲಿ ಇಬ್ಬರು ಹಿಂದಿರುಗಿ ಬಂದು, ಸರ್ಪಕೇತು ತನ್ನ ಸೈನಿಕರೊಂದಿಗೆ ಯಾವ ದಿಕ್ಕಿಗೆ ಓಡಿದನೆಂದು ಗೊತ್ತಾಗಿಲ್ಲವೆಂತಲೂ, ಅವರ ಹೆಜ್ಜೆಯ ಗುರುತುಗಳಿಂದ ಅವರು ಪಶ್ಚಿಮ ತೀರದ ಕಡೆಗೆ ಹೋದಂತೆ ಕಾಣುತ್ತದೆಂತಲೂ ಸಮಾಚಾರ ಹೇಳಿದರು. ಹಾಗೆ ಮುಂದಾಗಿ ತಿಳಿಸಿದುದು ಒಳ್ಳೆಯದಾಯಿತೆಂದು ಚಂದ್ರವರ್ಮನಿಗೆ ತೋರಿತು. ಭಟರ ಆಲೋಚನೆಯನ್ನು ಮೆಚ್ಚಿ ಅವರ ಭುಜಗಳನ್ನು ತಟ್ಟಿ ಪ್ರಶಂಸಿಸಿದನು. ಅದನ್ನು ಕೇಳಿ ಚಂದ್ರವರ್ಮನು ಧೀರಮಲ್ಲನ ಕಡೆಗೆ ತಿರುಗಿ, "ನೋಡಿದೆಯಾ ಧೀರಮಲ್ಲಾ! ಸರ್ಪಕೇತು ಮಾಹಿಷ್ಮತೀ ನಗರದ ಕಡೆಗೆ ಓಡಿಹೋಗಲಿಲ್ಲ. ಅವನು ನೇರಾಗಿ ಕಂಚುಕೋಟೆಯ ಕಡೆಗೇ ಪ್ರಯಾಣ ಹಿಡಿದಿದ್ದಾನೆ. ಅದೇ ಅವನು ಇಷ್ಟು ದೂರ ಬಂದುದರ ಉದ್ದೇಶವೆಂತಲೂ ನನ್ನ ಅಭಿಪ್ರಾಯ. ಆದುದರಿಂದ ಕಂಚುಕೋಟೆಯ ರಹಸ್ಯವು ನಮಗಿಂತ ಮೊದಲೇ ಅವನಿಗೆ ಗೊತ್ತಿರಲೇಬೇಕು!" ಎಂದನು. ಧೀರಮಲ್ಲನೂ




ಸುಬಾಹುವೂ ಹೌದು ಹೌದೆಂದು ಅವನ ಅಭಿಪ್ರಾಯವನ್ನು ಆಮೋದಿಸಿದರು. ಆದರೆ ತಾವೀಗ ಮಾಹಿಷ್ಮತೀ ನಗರಕ್ಕೆ ಹೋಗಬೇಕೋ, ಅಥವಾ ಸರ್ಪಕೇತುವನ್ನು ಹಿಂಬಾಲಿಸಿ ಕಂಚುಕೋಟೆಯ ಕಡೆಗೆ ಹೋಗಬೇಕೋ ? ಎಂದು ಚಂದ್ರವರ್ಮನು ತನಗೆ ತಾನೇ ಕೇಳಿಕೊಂಡನು. ಮೂವರೂ ಸ್ವಲ್ಪಹೊತ್ತು ಕರ್ತವ್ಯವನ್ನು ಚರ್ಚಿಸಿಕೊಂಡರು. ಕಡೆಗೆ ಕಂಚುಕೋಟೆಯ ರಹಸ್ಯವನ್ನು ಬಗೆಹರಿಸುವುದರ ಮೂಲಕ ಸರ್ಪಕೇತುವನ್ನು ಹತಮಾಡಿ, ಮಾಹಿಷ್ಮತಿಗೆ ಹೋಗುವುದೇ ಒಳ್ಳೆಯದೆಂದು ಅವರು ನಿಶ್ಚಯಿಸಿಕೊಂಡರು

ಕೂಡಲೇ ಎಲ್ಲಾ ಸೈನಿಕರನ್ನೂ ಒಂದುಗೂಡಿಸಿ, ಕಂಚುಕೋಟೆಯ ದಿಕ್ಕಿಗೇ ಪ್ರಯಾಣ ತೊಡಗಿದರು. ಸೈನ್ಯವು ತೆರೆದೆರೆಯಾಗಿ ಕದಲಿ ಪಶ್ಚಿಮ ದಿಕ್ಕಿಗೆ ಸಾಗುತ್ತಿದ್ದಿತು. ಶತ್ರುಗಳು ಹೋದ ದಾರಿಯ ಗುರುತು ಹಿಡಿದೇ ಚಂದ್ರವರ್ಮನ ಸೈನ್ಯವು ನಡೆಯುತ್ತಿದ್ದಿತು. ಗುಡ್ಡಗಳನ್ನೆಲ್ಲ ದಾಟಿ, ಅಡವಿ ಮಾರ್ಗದಲ್ಲಿ ಸ್ವಲ್ಪದೂರ ಪ್ರಯಾಣ ಮಾಡಿ ಒಂದು ದೊಡ್ಡ ನದಿಯ ತೀರವನ್ನು ತಲಪಿದರು.

ಆ ನದಿಯನ್ನು ನೋಡಿದ ಕೂಡಲೇ ಚಂದ್ರವರ್ಮನಿಗೆ ಆಶ್ಚರ್ಯವಾಯಿತು. ತುಂಬ ಆಳವೂ ಅಗಲವೂ ಆಗಿ ಜಲಪ್ರವಾಹದಿಂದ ಕುಣಿಯುವ ಆ ನದಿಯನ್ನು ಸೈನಿಕರೊಂದಿಗೆ ದಾಟುವ ಬಗೆ ಹೇಗೆ ? ಸರ್ಪಕೇತುವಾದರೂ ಈ ನದಿಯನ್ನು ಹೇಗೆ ದಾಟಿದನು ? ಅಥವಾ ಇಲ್ಲೆಲ್ಲಿಯಾದರೂ ತಮ್ಮ ಬರುವಿಕೆಯನ್ನು ಹೊಂಚು ಹಾಕಿ ಅಡಗಿಕೊಂಡಿರಬಹುದೆ ?

ಹೀಗೆ ಚಂದ್ರವರ್ಮನು ಬೆರಗಾಗಿ ನೋಡುತ್ತಿರಲು, ಸಮೀಪದಲ್ಲಿದ್ದ ಮರದ ಕೊಂಬೆಗಳೆಡೆಯಿಂದ ದೊಡ್ಡದೊಂದು ಭುಸುಗುಟ್ಟುವಿಕೆ ಕೇಳಿತು. ಅದನ್ನನುಸರಿಸಿ ಮೂರು ತಲೆಗಳ ಮಹಾ ಸರ್ಪವೊಂದು ಧೊತ್ತೆಂದು ಕೆಳಗೆ ಹಾರಿಬಿತ್ತು. ಎಲ್ಲರೂ ಭೀತಿಯಿಂದ ಅದನ್ನು ನೋಡುತ್ತಿರಲು, ಆ ಸರ್ಪವು ಮಾನವ ರೂಪ ತಾಳಿತು.

"ಚಂದ್ರವರ್ಮ ಪ್ರಭೂ" ಎಂದು ಗಟ್ಟಿಯಾಗಿ ಕೂಗುತ್ತಾ, ಆ ಸರ್ಪ ಮಾನವನು ಓಡುತ್ತಾ ಮುಂದೆ ಬಂದನು.

ತನ್ನ ಹೆಸರು ಹಿಡಿದು ಕರೆಯುತ್ತ ಬರುವ ಮಾನವನನ್ನು ನೋಡಿ ಚಂದ್ರವರ್ಮನು ಆನಂದದಿಂದ ಹಾರಿ ಮುಂದೆ ಹೋಗಿ "ಕಾಲಕೇತೂ! ನೀನೋ !" ಎನ್ನುತ್ತ ಅವನ ಕೈಯನ್ನು ಹಿಡಿದನು.

"ಹೌದು ! ನಾನೇ ! ನಿಮ್ಮ ದಯದಿಂದ ಕಾಲಕೇತುವಾಗಿ ನಿಜರೂಪಕ್ಕೆ ಬಂದವನೇ ನಾನು. ಮಂತ್ರದ ಕಾಪಾಲಿನಿಯ ಸೇವಕನಾಗಿದ್ದ ಕಾಲನಾಗನು ನಾನೇ. ನಿಮ್ಮ ಶತ್ರುವಾದ ಸರ್ಪಕೇತು ಈ ಮೊದಲೇ ತನ್ನ ಸೈನ್ಯದೊಂದಿಗೆ ಈ ನದಿಯನ್ನು ದಾಟಿಹೋದನು. ಅವನು ನದಿ ದಾಟಲು ಉಪ



ಯೋಗಿಸಿದ ಮರದ ತೆಪ್ಪಗಳನ್ನೂ, ಮರದ ತುಂಡುಗಳನ್ನೂ, ಆ ತೀರದಿಂದ ಈ ತೀರಕ್ಕೆ ತಂದು, ಅಗೋ ಅಲ್ಲಿ ಕಾಣುವ ಮರಗಳ ಗುಂಪಿನೆಡೆಯಲ್ಲಿ ಅಡಗಿಸಿಟ್ಟಿದ್ದೇನೆ" ಎಂದನು ಕಾಲಕೇತು.

"ಬನ್ನಿ" ಎಂದು ಕಾಲಕೇತು ಚಂದ್ರವರ್ಮನ ಕೈಹಿಡಿದು ಆಕಡೆಗೆ ಕರೆದುಕೊಂಡು ಹೋಗಿ, ಮರಗಳ ಹತ್ತಿರ ನದಿ ನೀರು ನಿಂತ ಹಳ್ಳದಲ್ಲಿರುವವುಗಳನ್ನು ತೋರಿಸಿ "ಚಂದ್ರವರ್ಮ ಪ್ರಭೂ! ನೋಡಿರಿ. ನಾನು ನಿಮಗೆ ಸಹಾಯ ಮಾಡಬೇಕೆಂಬ ಉದ್ದೇಶದಿಂದ, ಶಂಖಿನ ಪರ್ವತದಿಂದ ನೇರಾಗಿ ಈ ಕಡೆಗೇ ಬಂದೆನು. ಅನೇಕ ದಿನಗಳ ಕೆಳಗೆ ಕಾಪಾಲಿನಿ ತೀರಿಹೋದಳು. ಸಾಯುವ ಮೊದಲು ಅವಳು ಭೂತ ವರ್ತಮಾನಗಳನ್ನು ತೋರಿಸುವ ಗಾಜಿನ ಗೋಳವನ್ನೂ, ಮಾನವಾಸ್ಥಿಕೆಯನ್ನೂ ನನಗೆ ಕೊಟ್ಟು ಹೋದಳು. ಅವುಗಳಿಂದ ನೀವು ಎಲ್ಲಿ ಎಂತಹ ಕಷ್ಟದಲ್ಲಿರುವಿರೆಂಬುದನ್ನೆಲ್ಲ ಕಂಡುಕೊಂಡೆನು. ನಿಮ್ಮ ಶತ್ರುವಾದವನು, ನನಗೂ ಶತ್ರುವೇ ಎಂದು ಮೊದಲೇ ಸೂಚಿಸಿದ್ದೇನಷ್ಟೆ? ಈಗ ಆ ಸರ್ಪಕೇತು ತನ್ನ ಸೈನ್ಯದೊಂದಿಗೆ ಎಲ್ಲಿರುವನೆಂದು ನೋಡೋಣವೇ?" ಎಂದು ಕಾಲಕೇತು, ಮರದ ಮರೆಯಿಂದ ಗಾಜಿನ ಗೋಳವನ್ನು ಹೊರಗೆ ತೆಗೆದು, ಮಂತ್ರವನ್ನು ಜಪಿಸುತ್ತಾ, ಅದನ್ನು ಮಾನವಾಸ್ಥಿಕೆಯಿಂದ ಮುಟ್ಟಿದನು.

ಮರುಕ್ಷಣದಲ್ಲಿ ಗಾಜಿನ ಗೋಲದಲ್ಲಿ ಒಂದು ಅದ್ಭುತ ದೃಶ್ಯವು ಕಾಣಿಸಿತು.

ಜಗಜಗಿಸುವ ಸೂರ್ಯಕಾಂತಿಯಲ್ಲಿ ಕಂಚುಕೋಟೆ ಥಳಥಳಿಸಿಕೊಂಡಿದ್ದಿತು. ಕೋಟೆಯ ಗೋಡೆಯ ಉತ್ತರ ಭಾಗದ ಮುಖದ್ವಾರದ ದೊಡ್ಡದಾದ ಕಂಚಿನ ಹೆಬ್ಬಾಗಿಲು ಪೂರ್ತಿ ತೆರೆದುಕೊಂಡಿದ್ದಿತು. ಬಾಗಿಲಿನ ಮುಂದೆ ಕೆಲಮಂದಿ ಸೈನಿಕರು ಕಾವಲಿಗೆ ನಿಂತಿದ್ದರು. ಕೋಟೆಯೊಳಗೆ ಶಿಥಿಲವಾದ ಪರಿಸ್ಥಿತಿಯಲ್ಲಿದ್ದ ಅನೇಕ ಭವನಗಳಲ್ಲಿ ಸರ್ಪಕೇತುವಿನ ಸೈನಿಕರು ಇಷ್ಟಬಂದಂತೆ ವಿಹರಿಸುತ್ತ, ಅಪೂರ್ವವಾದ ರತ್ನಗಳನ್ನೂ ಬಂಗಾರವನ್ನೂ ಬಾಚಿಕೊಳ್ಳುವುದರಲ್ಲಿ ಮಗ್ನರಾಗಿದ್ದರು. ಎಲ್ಲರಿಗೂ ತಲೆಕಾಲು ತಿಳಿಯದಷ್ಟು ಸಂತೋಷ!

"ನೋಡಿದಿರಾ ಚಂದ್ರವರ್ಮ ಪ್ರಭೂ, ನಮ್ಮ ಶತ್ರುಗಳ ಗುಟ್ಟುಗಳ ಚಂದ ಹೀಗಿದೆ. ಅನೇಕರು ಅಂದುಕೊಳ್ಳುವ ಹಾಗೆ ಕಂಚುಕೋಟೆಯ ಗೋಡೆಗಳಿಗೆ ಸಮುದ್ರಜಲವು ತಾಗುವುದೇನಿಲ್ಲ. ಸುಮಾರು ನೂರು ವರ್ಷಗಳಿಗೆ ಹಿಂದೆ ಸಮುದ್ರವು ಉಕ್ಕಿ ಕಂಚುಕೋಟೆಯನ್ನು ಜಲಮಯ ಮಾಡಿ, ಮತ್ತೆ ಇಳಿಯುತ್ತ ಕ್ರಮವಾಗಿ ಕೋಟೆಯನ್ನು ಬಿಟ್ಟು ಬಹುದೂರ ಹೋಗಿಬಿಟ್ಟಿತು. ಇದು ನಿಜವಾದ ಆದರ ಪರಿಸ್ಥಿತಿ" ಎಂದನು ಕಾಲಕೇತು.

ಈ ಸಂಗತಿಯನ್ನು ನಿಂತಲ್ಲೇ ತಿಳಿದು ಚಂದ್ರವರ್ಮನು ಬಹಳ ಸಂತೋಷದಿಂದ ಉತ್ಸಾಹಿತ

ನಾಗಿ, ಸೈನಿಕರು ನದಿಯನ್ನು ದಾಟಲು ಆಜ್ಞೆ ಮಾಡಿದನು. ಕಾಲಕೇತು ಭದ್ರವಾಗಿರಿಸಿದ್ದ ತೆಪ್ಪಗಳೂ, ದೊಡ್ಡ ದೊಡ್ಡ ಮರದ ತುಂಡುಗಳೂ ದಿಮ್ಮಿಗಳೂ ಸೈನಿಕರೆಲ್ಲ ನದಿಯನ್ನು ದಾಟಲು ಉಪಯೋಗವಾದುವು. ಎಲ್ಲರೂ ಅತ್ಯುತ್ಸಾಹದಿಂದ ನಾಮುಂದೆ ತಾಮುಂದೆ ಅನ್ನುತ್ತ ನದಿಯನ್ನು ದಾಟಿದರು.

ಕಾಲಕೇತು ಒಂದು ಕುದುರೆಯ ಮೇಲೆ ಕುಳಿತು ಮುಂದಿನಿಂದ ದಾರಿ ತೋರಿಸಿಕೊಂಡು ಹೋದನು. ಉಳಿದವರೆಲ್ಲರೂ ಅವನನ್ನು ಅನುಸರಿಸಿ ಶರವೇಗದಿಂದ ಸಾಗತೊಗಿದರು.

ಹೀಗೆ ಒಂದು ಗಂಟೆ ಹೊತ್ತು ಹೋಗಲು, ಅವರ ಮುಂದೆ ಆಕಾಶವನ್ನು ಚುಂಬಿಸುವುದೋ ಎಂಬಂತೆ ಕಾಣುವ ಕೋಟೆಯ ಗೋಡೆ ಎದ್ದು ಕಾಣತೊಡಗಿತು. ಎಲ್ಲರೂ ತುಂಬಿದ ಕುತೂಹಲದ ವೇಗದಲ್ಲಿ ಕೋಟೆಯ ಬದಿಯನ್ನು ಸೇರಿ ಉತ್ತರ ದಿಕ್ಕಿನ ದ್ವಾರದ ಕಡೆಗೆ ಹೋದರು.

ಆಗ ದ್ವಾರಗಳು ಬಂಧಿಸಲ್ಪಟ್ಟಿದ್ದುವು. ಚಂದ್ರವರ್ಮನು ಧೀರಮಲ್ಲ ಮತ್ತು ಸುಬಾಹುಗಳನ್ನು ಕೂಡಿಕೊಂಡು ದ್ವಾರಗಳ ಹತ್ತಿರ ಹೋಗಿ ಪರೀಕ್ಷಿಸಿ ನೋಡಿದನು. ದೃಢವಾದ ಕಂಚಿನಿಂದ ಮಾಡಲ್ಪಟ್ಟ ದ್ವಾರಗಳು. ಅಷ್ಟೊಂದು ಬಲವಾದ ಕಂಚು ದ್ವಾರಗಳನ್ನು ಒಡೆದು ಹೇಗೆ ಒಳಗೆ ಪ್ರವೇಶಿಸಲು ಸಾಧ್ಯವಾದೀತು ?

ಚಂದ್ರವರ್ಮನು ಆಲೋಚಿಸಿಕೊಂಡಿರುವಾಗ ಕೋಟೆಯ ಗೋಡೆಯ ಮೇಲೆ ಸರ್ಪಕೇತು ಗಟ್ಟಿಯಾಗಿ ಕೂಗುವುದು ಕೇಳಿಬಂತು. ಅವನ ಹಿಂದೆ ದೊಡ್ಡ ದೊಡ್ಡ ತಟ್ಟೆಗಳನ್ನೂ, ಬುಟ್ಟಿಗಳನ್ನೂ, ಗೋಣೀಚೀಲಗಳನ್ನೂ ಹಿಡಿದುಕೊಂಡು ಕೆಲಮಂದಿ ಸೈನಿಕರು ನಿಂತಿರುವುದೂ ಕಂಡಿತು.

ಸರ್ಪಕೇತು ತನ್ನ ಅಕ್ಕಪಕ್ಕಗಳಲ್ಲಿ ನಿಂತಿರುವವರನ್ನು, ಕೆಳಗಿರುವ ಚಂದ್ರವರ್ಮನ ಕಡೆಯ ಸೈನಿಕರಿಗೆ ತೋರಿಸುತ್ತ, "ಇಲ್ಲಿ ನೋಡಿರಿ. ಈ ನನ್ನ ಸೈನಿಕರ ಕೈಯಲ್ಲಿರುವ ಗೋಣೀಚೀಲ, ತಟ್ಟೆಗಳು,



ಬುಟ್ಟಿಗಳಲ್ಲಿ ಅಪಾರ ಬೆಲೆಯ ರತ್ನಗಳೂ, ಬಂಗಾರಗಳೂ ತುಂಬಿವೆ. ಈಗ ನನ್ನ ಪಕ್ಷಕ್ಕೆ ಬರುವವರಿಗೆಲ್ಲಾ ಇವು ಸಿಗುತ್ತವೆ. ಅಂಥವರು ಮಾತ್ರ ಒಳಗೆ ಬರಲು ಕೋಟೆಯ ಬಾಗಿಲನ್ನು ತೆರೆಯಿಸುತ್ತೇನೆ. ನಾನು ಹೇಳುವುದು ನಿಜವೋ ಸುಳ್ಳೋ ಎಂಬುದನ್ನು ನೀವೇ ನೋಡಿ ನಿಶ್ಚಯಕ್ಕೆ ಬನ್ನಿರಿ" ಎಂದು ಕೂಗಿ ಒಂದಕ್ಕೆ ಎರಡು ಸಾರಿ ಹೇಳಿದನು.

ಆಮೇಲೆ ಅವನೊಂದಿಗಿದ್ದ ಸೈನಿಕರು ಗೋಣೀಚೀಲ, ತಟ್ಟೆ, ಬುಟ್ಟಿಗಳಿಂದ ಬೆಳ್ಳಿ; ಬಂಗಾರಗಳನ್ನೂ, ರತ್ನಗಳನ್ನೂ ಚಂದ್ರವರ್ಮನ ಸೈನಿಕರ ಮೇಲೆ ಬೀಳುವಂತೆ ಕವುಚಿ ಹಾಕಿದರು.

ಚಂದ್ರವರ್ಮನ ಸೈನಿಕರು ಅತ್ಯಾತುರದಿಂದ ಅವುಗಳನ್ನು ಹೆಕ್ಕಿಕೊಳ್ಳುವ ಭರದಲ್ಲಿ ಒಬ್ಬರನ್ನೊಬ್ಬರು ದೂಡಾಡಿಕೊಳ್ಳತೊಡಗಿದರು. ಹೀಗೆ ಸರ್ಪಕೇತುವಿನ ತಂತ್ರವು ತನ್ನ ಮೇಲೆ ತಿರುಗಿ ಹೊಡೆಯಲಿರುವ ಪರಿಸ್ಥಿತಿಯನ್ನು ನೋಡಿ ಚಂದ್ರವರ್ಮನು ಸುಬಾಹುವನ್ನು ನೋಡಿ, "ಸುಬಾಹೂ, ನೀನು ನಮ್ಮ ವೀರಪುರದ ಸೈನಿಕರನ್ನು ಶತ್ರುಪಕ್ಷದಲ್ಲಿ ಸೇರುವವನಂತೆ ನಟಿಸುತ್ತ ಕೋಟೆಯ ಬಾಗಿಲು ತೆರೆಯುವಂತೆ ಮಾಡು. ಕೂಗಿ ಕೂಗಿ ಹೇಳು. ಅದನ್ನು ನಂಬಿ ಸರ್ಪಕೇತು ಬಾಗಿಲು ತೆರೆಯಿಸಿದರೆ ಕೂಡಲೇ ಒಳಗೆ ಪ್ರವೇಶಿಸು. ನಾನೂ, ಧೀರಮಲ್ಲನೂ ಉಳಿದ ಸೈನ್ಯದೊಂದಿಗೆ ಬರುತ್ತೇವೆ. ಆಗ ಒಮ್ಮೆಗೇ ಶತ್ರುಗಳ ಮೇಲೆ ಬಿದ್ದು ಅವರನ್ನೆಲ್ಲ ನಾಶಮಾಡಿಬಿಡಬಹುದು. ಹೇಗಾದರೂ ಬಾಗಿಲನ್ನು ಒಡೆದು ನಾವು ಒಳಗೆ ಬರುತ್ತೇವೆಂದು ತಿಳಿದೇ ಅವನು ಈ ಭೇದೋಪಾಯವನ್ನು ಪ್ರಯೋಗಿಸಿದ್ದಾನೆ. ಅದನ್ನೇ ನಾವು ಸಾಧಕಪಡಿಸಿಕೊಳ್ಳೋಣ" ಎಂದನು.

ಈ ಮಾತು ಸುಬಾಹುವಿಗೂ ಸರಿಯೆನಿಸಿತು. ಕೂಡಲೇ ಅವನು ಸೈನಿಕರ ಬಳಿಗೆ ಹೋಗಿ, ಅವರೊಂದಿಗೆ ರಹಸ್ಯವಾಗಿ ಮಾತಾಡಿದನು.

ನೋಡನೋಡುತ್ತಿದ್ದಂತೆ ಸೈನ್ಯದಲ್ಲಿ ದೊಡ್ಡದೊಂದು ಭಾಗವು ಪ್ರತ್ಯೇಕವಾಗಿ, "ಸರ್ಪಕೇತು





ಮಹಾರಾಜರಿಗೆ ಜೈ! ಸರ್ಪಕೇತು ಚಕ್ರೇಶ್ವರರಿಗೆ ಜೈ ಜೈ!" ಎಂದು ಘೋಷಣವೆಬ್ಬಿಸುತ್ತ ಕೋಟೆಯ ದ್ವಾರದ ಕಡೆಗೆ ಕದಲಿತು. ಅವರು ಮುಂದೆ ಹೋಗುವಾಗ ಅವರನ್ನು ಅಟಕಾಯಿಸುವವರಂತೆ ಮತ್ತೆ ಕೆಲವರು ಗುಂಪು ಗುಂಪಾಗಿ ಓಡುತ್ತ ಠಕ್ಕಿನ ಯುದ್ಧಕ್ಕೆ ತೊಡಗಿದರು. ಈ ನಟನಾ ಯುದ್ಧದಲ್ಲಿ ಚಂದ್ರವರ್ಮ ಧೀರಮಲ್ಲರೂ ಸೇರಿದರು.

ಚಂದ್ರವರ್ಮನ ಸೈನ್ಯದಲ್ಲಿ ಒಡಕಿನ ಬಂಡಾಯವೆದ್ದಿತೆಂದು ನಂಬಿದ ಸರ್ಪಕೇತು ಕೋಟೆಯ ಗೋಡೆಯ ಮೇಲಿನಿಂದ ವಿಕಟಾಟ್ಟಹಾಸ ಮಾಡುತ್ತ, "ಕೋಟೆಯ ಬಾಗಿಲನ್ನು ತೆರೆಯಿರಿ. ಕೆಳಗಿರುವ ಶತ್ರುಗಳ ಬಹುಭಾಗದ ಸೈನಿಕರು ನಮ್ಮ ಕಡೆಗೆ ಬರಲು ತವಕಿಸುತ್ತಿದ್ದಾರೆ. ಇನ್ನು ಕ್ಷಣಮಾತ್ರದಲ್ಲಿ ಚಂದ್ರವರ್ಮ ಮುಂತಾದ ಮುಖ್ಯ ಶತ್ರುಗಳನ್ನು ನನ್ನ ಕತ್ತಿಗೆ ಬಲಿಕೊಟ್ಟು ಮುಗಿಸಿಬಿಡುತ್ತೇನೆ" ಎಂದು ಕೂಗಿಕೊಂಡನು.

ಕಂಚುಕೋಟೆಯ ಕಂಚಿನ ದ್ವಾರಗಳು ಠೀಂಕಾರವದೊಂದಿಗೆ ತೆರೆಯಲ್ಪಟ್ಟವು.

ಬಾಗಿಲು ತೆರೆಯಿತೋ ಇಲ್ಲವೋ ಎಂಬಷ್ಟರಲ್ಲೇ ಸರ್ಪಕೇತುವಿನ ಸಂತೋಷದ ಅಟ್ಟಹಾಸವು ತಲೆಕೆಳಗಾಗಿ ಹೋಯಿತು. ಅವನ ಧೈರ್ಯ ನೀರುನೀರಾಗಿ ಹೋಗುವಂತೆ ಅವನ ಸೈನಿಕರೆಲ್ಲ ನೆಲಸಮರಾಗಿ ಹೋಗುತ್ತಿದ್ದರು. ಮೊದಲು ಹೊಕ್ಕ ಸುಬಾಹು ತನಗಿದಿರಾದ ಸೈನಿಕರನ್ನು ಕಡಿಕಡಿದು ಹಾಕುತ್ತ ಒಳಗೆ ನುಗ್ಗಿದನು. ಅವನ ಹಿಂದೆಯೇ ಚಂದ್ರವರ್ಮ, ಧೀರಮಲ್ಲಂದಿರೂ ಯಮಕಿಂಕರರಂತೆ ಒಳಗೆ ನುಗ್ಗಿದರು. ಚಂದ್ರವರ್ಮನ ಪಕ್ಷದವರು ಬಾಳೇ ತೋಟಕ್ಕೆ ನುಗ್ಗಿದ ಕಾಡಾನೆಗಳಂತೆ ನಾಶಲೀಲೆಯಾಡುತ್ತ, ಅಂತಕನ ಕೋಲಾಹಲವೆಬ್ಬಿಸುತ್ತಿದ್ದರು. ಅಳಿದುಳಿದ ಶತ್ರು ಸೈನಿಕರು ಸಿಕ್ಕಸಿಕ್ಕ ಹಾಗೆ ಓಡುತ್ತಿದ್ದರು.

ನಡೆದ ಮೋಸವನ್ನು ನೋಡಿ ಸರ್ಪಕೇತುವಿನ ಸರ್ವಾಂಗವೂ ಭಗ್ಗೆಂದಿತು. ಅವನು ಕೋಟೆಯ ಗೋಡೆಯ ಮೇಲಿರುವ ತನ್ನ ಕೆಲವು ಭಟರಿಗೆ ಆಜ್ಞೆಮಾಡಿ ಅಲ್ಲಿದ್ದ ದೊಡ್ಡ ದೊಡ್ಡ ಬಂಡೆ ಕಲ್ಲುಗಳನ್ನು ಎತ್ತಿಸಿ, ಕೆಳಗಿರುವ ಚಂದ್ರವರ್ಮನ ಸೈನಿಕರ ಮೇಲೆ ಹಾಕಿಸತೊಡಗಿದನು.

ಅದನ್ನು ನೋಡಿ ಸುಬಾಹುವಿನೊಂದಿಗೆ ಚಂದ್ರವರ್ಮನು, "ಸುಬಾಹೂ! ಆ ದುಷ್ಟ ಸರ್ಪಕೇತುವನ್ನು ಜೀವದೊಂದಿಗೆ ಹಿಡಿದು ಬಂಧಿಸಲಾಗುತ್ತೋ ನೋಡಬೇಕು. ಅಗೋ, ಅಲ್ಲಿ ಜರಿದುಬಿದ್ದ ಕೋಟೆಯ ಗೋಡೆಯ ಕಲ್ಲುಗಳ ಮೇಲಿಂದಾಗಿ ಹೋಗಿ ಆ ಕೆಲಸ ನೋಡು. ಹಿಡಿಯಲಾಗದಿದ್ದರೆ ಕತ್ತಿಗೆ ಬಲಿ ಕೊಡು" ಎಂದು ಕೂಗಿ ಹೇಳಿದನು.

ಸುಬಾಹು ಕೆಲವು ಸೈನಿಕರೊಂದಿಗೆ ಜರಿದ ಕೋಟೆಗೋಡೆಯ ಕಲ್ಲುಗಳ ಮೇಲಿಂದಾಗಿ ಹೋಗಿ ಗೋಡೆಯ ಮೇಲು ಭಾಗವನ್ನು ಸೇರಿದನು. ಆದರೆ



ಸರ್ಪಕೇತುವನ್ನು ಹಿಡಿಯಲು ಸಾಧ್ಯವೆಂದು ಅವನಿಗೆ ಕಾಣಲಿಲ್ಲ. ತನಗೆ ಹೇಗೂ ಸಾವು ತಪ್ಪುವಂತಿಲ್ಲ ವೆಂದು ತಿಳಿದು ಸರ್ಪಕೇತು ರಾಕ್ಷಸನ ಹಾಗೆ ಬೊಬ್ಬಿಡುತ್ತ, ಇದಿರಾದ ಸೈನಿಕರನ್ನು ಕಡಿಗಡಿದು ಹಾಕುತ್ತಿದ್ದನು, ಕೋಟೆ ಗೋಡೆಯ ಮೇಲೆ ಸುಳಿ ಗಾಳಿಯಂತೆ ತಿರುಗುತ್ತಿದ್ದನು. ಅವನ ಹುಚ್ಚು ಕೊಲೆಗಾರಿಕೆಯ ಅಟ್ಟಹಾಸವನ್ನು ನೋಡಿ ಚಂದ್ರ ವರ್ಮನ ಪಕ್ಷದವರು ನಡುಗಿದರು.

"ಚಂದ್ರವರ್ಮಾ ! ಸರ್ಪಕೇತುವಿಗೆ ಸರಿಯಾದ ಪ್ರತಿಸ್ಪರ್ಧಿ ನಾನೇ. ಅವನು ಈಗ ಕೋಟೆಯ ಗೋಡೆಯ ಮೇಲಿನಿಂದ ದೊಡ್ಡ ಶಿಲೆಯ ಹಾಗೆ ಬೀಳುತ್ತಾನೆ ನೋಡಿರಿ ! ಜೀವದೊಂದಿಗೆ ಅವನನ್ನು ಬಂಧಿಸಬೇಕಾದರೆ, ಅವನು ಭೂಮಿಗೆ ಬಿದ್ದು ತುಂಡು ತುಂಡಾಗುವುದರೊಳಗೇ ನೋಡಬೇಕು" ಎಂದು ಕೂಗುತ್ತಾ, ಕಾಲಕೇತು ಕತ್ತಿಯನ್ನು ಹಿರಿದುಕೊಂಡು ಕೋಟೆಯ ಗೋಡೆಯ ಮೇಲೆ ಓಡುತ್ತಾ, ಏರಿದನು.

ಕಾಲಕೇತುವನ್ನು ನೋಡಿದ ಕೂಡಲೇ ಸರ್ಪಕೇತು ದೊಂಡೆ ಒಡೆಯುವಂತೆ ಗರ್ಜಿಸಿ ಅವನ ಕಡೆಗೆ ಹಾರಿದನು. ಕಾಲಕೇತು ಫಕ್ಕನೆ ನೆಲಕ್ಕೆ ಬಿದ್ದು ಅವನ ಹೊಡೆತವನ್ನು ತಪ್ಪಿಸಿಕೊಂಡು, ಅದೇ ವೇಗ ದಲ್ಲಿ ತನ್ನ ಕತ್ತಿಯನ್ನು ಮುಂದಕ್ಕೆ ಚಾಚಿ ಎದ್ದು, "ಸರ್ಪಕೇತೂ! ನೀನೀಗ ನಿಂತಿರುವುದು ಕಾಲಕೇತು ವಿನ ಮುಂದೆ ! ಕಾಲಕೇತುವೆಂದರೆ ಮೂರು ತಲೆಗಳ ಸರ್ಪ ! ನೋಡು !" ಎನ್ನುತ್ತಾ, ಸರ್ಪಾಕೃತಿಯಲ್ಲಿ ನಿಂತು ಮೂರು ತಲೆಗಳಿಂದಲೂ ಭುಸುಗುಟ್ಟಿದನು.

ಸರ್ಪಕೇತು ಕ್ಷಣಕಾಲ ಸ್ತಂಭಿತನಾಗಿ, ಮರುಕ್ಷಣ ದಲ್ಲಿ ಬೆವತು ನಡುಗುತ್ತಾ, ಕೆಟ್ಟ ಸ್ವರದಿಂದ ಕೂಗುತ್ತಾ, ಹಿಂದೆ ಹಿಂದೆ ಸರಿಯುತ್ತಾ, ಸರ್ಪದ ತಲೆಗಳಿಂದ ದೂಡಲ್ಪಡುತ್ತಾ, ಒಮ್ಮೆಗೇ ತಲೆಕೆಳ ಗಾಗಿ ಹಿಮ್ಮುಗುಚಿ ಬಿದ್ದನು.

* * *

ಎಲ್ಲಾ ಸಪ್ಪಗಾಗಿ ಭಯಾಂದೋಲನೆಗಳ ಬೀಭತ್ಸತೆ ಗಳು ನಿಂತು, ವಾತಾವರಣವೆಲ್ಲಾ ಬದಲಾಯಿತು. ಅಲ್ಲೆಲ್ಲಾ ಶಾಂತಿ ಸಂತೋಷಗಳು ಹರಡುತ್ತಿರಲು, ಕಾಲಕೇತು ತಾನು ಕಂಚುಕೋಟೆಯಲ್ಲೇ ವಾಸ ಮಾಡಲು ಅನುಮತಿ ಕೊಡಬೇಕೆಂದು ಕೇಳಲು, ಚಂದ್ರವರ್ಮನು ಅದಕ್ಕೆ ಒಪ್ಪಿಗೆ ಕೊಟ್ಟನು. ಆ ದಿನ ರಾತ್ರಿ ಚಂದ್ರವರ್ಮನು ಕಂಚುಕೋಟೆಯಲ್ಲೇ ತಂಗಿದ್ದು, ಮರುದಿನ ಬೆಳಗಾದ ಮೇಲೆ ಅಲ್ಲಿಯ ಅಪರಿಮಿತ ಧನರಾಶಿಯನ್ನು ಅನೇಕ ಮೂಟೆಗಳಾಗಿ ಕಟ್ಟಿಸಿ ಹೊರಿಸಿಕೊಂಡು ಎಲ್ಲರೊಂದಿಗೆ ಅಲ್ಲಿಂದ ಪ್ರಯಾಣ ಹೊರಟನು.

ಎರಡು ದಿನ ಪ್ರಯಾಣ ಸಾಗಿದ ಮೇಲೆ ರುದ್ರ ಪುರದ ನಿವಾಸಿಗಳಾದ ಕೆಲವರು ಚಂದ್ರವರ್ಮನ ಬಳಿಗೆ ಬಂದು, ಅಲ್ಲಿಯ ರಾಜನಾದ ಶಿವಸಿಂಹನು ಪರ್ವತಗಳ ಕಡೆಗೆ ಓಡಿಹೋದನೆಂದೂ, ಈಗ ತಮ್ಮ ದೇಶಕ್ಕೆ ರಾಜನೇ ಇಲ್ಲದೆ, ಅರಾಜಕ ಪರಿಸ್ಥಿತಿ

ಬಂದಿತೆಂದೂ ಮೊರೆಯಿಟ್ಟುಕೊಂಡರು. ಚಂದ್ರವರ್ಮನು ಅವರೆಲ್ಲರ ಒಪ್ಪಿಗೆ ಪಡೆದು, ಮುದುಕನ ಮಗನಾದ ದೇವಲನನ್ನು ರುದ್ರಪುರದ ರಾಜನಾಗಿರುವಂತೆ ಪಟ್ಟಾಭಿಷೇಕ ಮಾಡಿಸಿದನು.

ಅಲ್ಲಿಂದ ಚಂದ್ರವರ್ಮನು ಮಾಹಿಷ್ಮತೀ ನಗರಕ್ಕೆ ಹೋಗುತ್ತಿರಲು, ಮಾಹಿಷ್ಮತೀ ನಗರವಾಸಿಗಳಿಗೆ ಕ್ರೂರ ರಾಜನಾದ ಸರ್ಪಕೇತು ಸತ್ತುಹೋದನೆಂಬ ವಾರ್ತೆ ಮೊದಲೇ ಮುಟ್ಟಿಬಿಟ್ಟಿತ್ತು. ಚಂದ್ರವರ್ಮನು ದೂರದಲ್ಲಿ ಬರುತ್ತಿರುವಾಗಲೇ ಆ ಸುದ್ದಿಯೂ ಅವರಿಗೆ ಮುಂದಾಗಿ ತಿಳಿದು ಸಂತೋಷದಲ್ಲಿ ಅದ್ದಿತು. ಅವರೆಲ್ಲಾ ನಗರವನ್ನು ಅಲಂಕರಿಸಿ, ಮಂಗಳ ವಾದ್ಯಗಳನ್ನು ಮೊಳಗಿಸುತ್ತ ಚಂದ್ರವರ್ಮನನ್ನು ಸ್ವಾಗತಿಸಲು ಇದಿರಾಗಿ ಬರತೊಡಗಿದರು. ಹಾಗೆ ಬಂದವರು, ತಮ್ಮ ರಾಜ್ಯಕ್ಕೆ ಚಂದ್ರವರ್ಮನೇ ಚಕ್ರವರ್ತಿಯಾಗಿರಬೇಕೆಂದು ಕೇಳಿಕೊಂಡರು.

ಆದರೆ ಚಂದ್ರವರ್ಮನು ಅದಕ್ಕೆ ಒಪ್ಪಿಕೊಳ್ಳಲಿಲ್ಲ. ಯಶೋವರ್ಧನ ಚಕ್ರವರ್ತಿಯ ಹಿರಿಯ ಕುಮಾರನಾದ ತಪೋವರ್ಧನನ ಬಳಿಗೆ ಪುರೋಹಿತರನ್ನು ಕಳುಹಿಸಿ, ಕರೆತಂದು ಪಟ್ಟಾಭಿಷೇಕ ಮಾಡುವುದೇ ಒಳ್ಳೆಯದೆಂದು ಅವರಿಗೆಲ್ಲಾ ತಿಳಿಹೇಳಿದನು.

ಕುಮಾರ ತಪೋವರ್ಧನನು ಮಾಹಿಷ್ಮತೀ ನಗರದ ಸಮೀಪದ ಅರಣ್ಯದಲ್ಲಿ ಕುಟೀರ ನಿರ್ಮಿಸಿಕೊಂಡು ತಪಸ್ಸು ಮಾಡುತ್ತಿರಲು, ಅವನ ಬಳಿಗೆ ಚಂದ್ರವರ್ಮನೂ, ಮಂತ್ರಿ ಪುರೋಹಿತಾದಿಗಳೂ, ಪುರಪ್ರಮುಖರೂ ಹೋಗಿ, ಅವನನ್ನು ಸಿಂಹಾಸನಾರೂಢನಾಗಿ ಪರಿಪಾಲನೆ ನಡೆಸಬೇಕೆಂದು ಕೇಳಿಕೊಂಡರು.

ಆದರೆ ತಪೋವರ್ಧನನು ಅವರ ಕೋರಿಕೆಗಳನ್ನು ಅಂಗೀಕರಿಸದೆ, "ನಾನು ಎಂದೋ ಸರ್ವಸಂಗ ಪರಿತ್ಯಾಗ ಮಾಡಿದವನು. ನನಗೆ ರಾಜ್ಯಾಕಾಂಕ್ಷೆ ಲವಲೇಶವೂ ಇಲ್ಲ. ನಿಮ್ಮೆಲ್ಲರ ಗೌರವಾದರಣೆಗಳಿಗೆ ಪಾತ್ರನಾಗಿ, ಚಂದ್ರವರ್ಮನು ನಿಮಗೆಲ್ಲಾ ಚಕ್ರವರ್ತಿಯಾಗಿರಲು ತುಂಬ ಅರ್ಹನಾಗಿದ್ದಾನೆ. ಹಾಗೇ ಮಾಡಿರಿ" ಎಂದು ಖಂಡಿತವಾಗಿ ಹೇಳಿಬಿಟ್ಟನು.

ಆಮೇಲೆ ಪ್ರಜೆಗಳ ಕೋರಿಕೆಯನ್ನು ಮನ್ನಿಸಿ, ತಪೋವರ್ಧನನು ಪಟ್ಟಾಭಿಷೇಕಕ್ಕೆ ಬಂದು, ತಾನೇ ಚಂದ್ರವರ್ಮನ ತಲೆಯ ಮೇಲೆ ಕಿರೀಟವನ್ನಿಟ್ಟನು. ಎಲ್ಲರ ಜಯಜಯಧ್ವಾನವು ಆಕಾಶವನ್ನು ಭೇದಿಸಿತು.

ಚಂದ್ರವರ್ಮನು ತನ್ನ ವಿಶ್ವಾಸಕ್ಕೆ ಪಾತ್ರರಾದ ಧೀರಮಲ್ಲ, ಸುಬಾಹುಗಳಿಗೆ ಮುಖ್ಯ ಮಂತ್ರಿ ಪದವಿಯನ್ನೂ, ಮುಖ್ಯ ಸೇನಾನಿಯ ಪದವಿಯನ್ನೂ ಕೊಟ್ಟು, ಪ್ರಜಾರಂಜಕನಾಗಿ ಬಹಳ ಕಾಲ ರಾಜ್ಯವಾಳಿದನು.

—( ಮುಗಿಯಿತು )






# ಅಕ್ಕತಂಗಿಯರು

ತನ್ನನ್ನು ಬಿಡದೆ ಬೆಂಬತ್ತಿ ಬರುತ್ತಿರುವ ರಾಜಾ ತ್ರಿವಿಕ್ರಮನಿಂದ ತಪ್ಪಿಸಿಕೊಳ್ಳಲು ಬೇತಾಳವು ಕಥೋಪಾಯವನ್ನು ಆಲೋಚಿಸಿಕೊಂಡಿರುವಾಗ, ಮತ್ತೆ ಬಂದು ಮರವನ್ನೇರಿದ ತ್ರಿವಿಕ್ರಮನು ಬೇತಾಳಾವೇಶಿತ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೆ ಹಾಕಿಕೊಂಡು ನಡೆಯತೊಡಗಿದನು. ಆಗ ಬೇತಾಳವು ಮಾತೆತ್ತಿ "ಎಲೈ ಮಹಾರಾಜನೇ, ನಿನ್ನ ಈ ಅರ್ಧ ರಾತ್ರಿಯ ಸಾಧನೆಯನ್ನೂ, ಪಟ್ಟು ಬಿಡದ ಗಟ್ಟಿಗತನವನ್ನೂ ನೋಡುವಾಗ ನೀನು ಯಾರಿಗಾಗಿಯೋ ನಿಃಸ್ವಾರ್ಥಬುದ್ಧಿಯಿಂದ ಸೇವೆ ಮಾಡುವವನೇನೋ ಎಂಬ ಶಂಕೆಯುಂಟಾಗುತ್ತದೆ. ಆದರೆ ಕೆಲವು ಸಂದರ್ಭಗಳಲ್ಲಿ ಯಾವುದು ಸ್ವಾರ್ಥ, ಯಾವುದು ನಿಃಸ್ವಾರ್ಥ ಎಂದು ತಿಳಿಯುವುದೂ ಕಷ್ಟವಾಗುತ್ತದೆ. ಬಹು ದೊಡ್ಡ ಮಹಿಮಾನ್ವಿತನೆಂದು ಎಲ್ಲರೂ ಹೊಗಳುವ ಜ್ಞಾನಶಿಖನೆಂಬ ಮಹಾ ಯೋಗಿಯೇ ಈ ವಿಷಯದಲ್ಲಿ ತಪ್ಪಿಬಿದ್ದು, ಒಬ್ಬ ನಿರ್ದೋಷಿಗೆ ಮನೋವೇದನೆಯನ್ನುಂಟು ಮಾಡಿದನು. ನಿನಗೆ ನಡೆಯುವ ಶ್ರಮ ತಿಳಿಯದಂತಿರಲು ವಿಚಿತ್ರವಾದ ಆ ಕಥೆಯನ್ನು ಹೇಳು

ಬೇತಾಳಕಥೆಗಳು



ತ್ತೇನೆ. ಕೇಳು" ಎಂದು ಈ ರೀತಿಯಾಗಿ ಕಥೆ ಹೇಳಲು ಪ್ರಾರಂಭಮಾಡಿತು.

ಕರವೀರ ರಾಜ್ಯದಲ್ಲಿ ಧರ್ಮವೀರನೆಂಬ ಒಬ್ಬ ಸಾಮಂತ ರಾಜನಿದ್ದನು. ಅವನ ಇಬ್ಬರು ಕುಮಾರಿಯರ ಹೆಸರು, ನರ್ಮದೆ ಅಕ್ಕ; ನೀರದೆ ತಂಗಿ. ಇಬ್ಬರೂ ಸುಂದರಿಯರೇ ಆಗಿದ್ದರೂ, ನೀರದೆ ನರ್ಮದೆಗಿಂತಲೂ ಎದ್ದು ಕಾಣುವಂತಹ ಹೆಚ್ಚಿನ ಸೌಂದರ್ಯ ಪಡೆದಿದ್ದಳು. ಗುಣದಲ್ಲಿ ಕೂಡಾ ನೀರದೆ ನರ್ಮದೆಗಿಂತಲೂ ಹೆಚ್ಚಿನ ಸುಖ ಭೋಗಗಳ ಆಕಾಂಕ್ಷೆಯ ಗುಣವುಳ್ಳವಳು. ಧನ, ಅಧಿಕಾರ, ಅಲಂಕಾರಗಳಲ್ಲಿ ನರ್ಮದೆಗಿಂತಲೂ ನೀರದೆಗೆ ಹೆಚ್ಚಿನ ಆಸಕ್ತಿಯಿತ್ತು.

ಒಂದು ದಿನ ಪದ್ಮಕೇತುವೆಂಬ ಗಂಧರ್ವನು ಆಕಾಶಮಾರ್ಗದಲ್ಲಿ ಹೋಗುತ್ತಿರುವಾಗ, ವನದಲ್ಲಿ ಒಬ್ಬಂಟಿಗಳಾಗಿ ವಿಹರಿಸಿಕೊಂಡಿದ್ದ ನರ್ಮದೆಯನ್ನು ನೋಡಿದನು. ಅವಳ ಆಕರ್ಷಣೆ ಎಳೆದಂತಾಗಿ ಮುಂದೆ ಹೋಗಲು ಮನಸ್ಸು ಬಾರದೆ, ಆ ಗಂಧರ್ವನು ಕೆಳಗಿಳಿದು ಅವಳ ಹತ್ತಿರ ನಿಂತು "ಸುಂದರೀ !" ಎಂದು ಮೆಲ್ಲನೆ ಕರೆದನು.

ಅದನ್ನು ಕೇಳಿ ನರ್ಮದೆ ಅವನ ಕಡೆಗೆ ತಿರುಗಿ ನೋಡಿ ತುಂಬಾ ಆಶ್ಚರ್ಯಪಟ್ಟಳು.

ಅವಳ ಆಶ್ಚರ್ಯವನ್ನು ಗಮನಿಸಿದ ಪದ್ಮಕೇತು ಅವಳೊಂದಿಗೆ, "ನಾನೊಬ್ಬ ಗಂಧರ್ವನು. ಹೆಸರು ಪದ್ಮಕೇತು. ಆಕಾಶ ಮಾರ್ಗದಲ್ಲಿ ಹೋಗುತ್ತಿದ್ದ ನನ್ನನ್ನು ನಿನ್ನ ದಿವ್ಯ ಸೌಂದರ್ಯವು ಕೆಳಗೆ ಎಳೆದು ಬಿಟ್ಟಿತು. ಗಂಧರ್ವ ಸುಖಗಳ ಮೇಲೆ ನಿನಗೆ ಇಷ್ಟವಿದ್ದರೆ ಹೇಳು. ನಾನು ನಿನ್ನನ್ನು ಮದುವೆ ಮಾಡಿಕೊಳ್ಳುತ್ತೇನೆ" ಎಂದನು.

ಆ ಮಾತು ಕೇಳಿ ಮತ್ತಷ್ಟು ಆಶ್ಚರ್ಯಕ್ಕೆ ಬಿದ್ದ ನರ್ಮದೆ ಒಂದೆರಡು ಕ್ಷಣ ಸುಮ್ಮನಿದ್ದು ಆಮೇಲೆ, "ತಾವು ಥಕ್ಕನೆ ಹೀಗೆ ಕೇಳಿದರೆ ನಾನೇನು ಉತ್ತರ ಕೊಡಲಿ ? ನಾಳೆ ಸಾಯಂಕಾಲದ ವರೆಗೆ ನನಗೆ ಅವಧಿ ಕೊಟ್ಟರೆ ತಕ್ಕ ಉತ್ತರ ಕೊಟ್ಟೇನು" ಎಂದಳು. ಅದಕ್ಕೆ ಒಪ್ಪಿಕೊಂಡು ಗಂಧರ್ವನು ಆಕಾಶಕ್ಕೆ ಹಾರಿ ಹೋಗಿಬಿಟ್ಟನು.

ಆ ಕ್ಷಣದಿಂದ ರಾತ್ರಿ ಬಹಳ ಹೊತ್ತಾಗುವ ವರೆಗೂ ನರ್ಮದೆ ಆ ಗಂಧರ್ವನನ್ನೇ ನೆನೆಯುತ್ತ ಆಲೋಚನೆಯಲ್ಲಿ ತಳಮಳಿಸಿಕೊಂಡಿದ್ದಳು. ಕಡೆಗೆ ಒಂದು ನಿಶ್ಚಯಕ್ಕೆ ಬಂದು ಚಿಂತೆಬಿಟ್ಟು ಹಾಯಾಗಿ ನಿದ್ದೆ ಮಾಡಿದಳು.

ಮರುದಿನ ಸಾಯಂಕಾಲ ನರ್ಮದೆ ಅದೇ ವನಕ್ಕೆ ಹೋಗಿ ವಿಹರಿಸತೊಡಗಿದಳು. ಸ್ವಲ್ಪ ಹೊತ್ತಿಗೆ ಪದ್ಮಕೇತು ಗಂಧರ್ವನು ಅವಳ ಬಳಿಗೆ ಬಂದು ನಿಂತನು.

ನರ್ಮದೆ ಅವನೊಂದಿಗೆ ವಿನಯವಾಗಿ, "ನೀವು ಕೇಳಿದ ಪ್ರಶ್ನೆಯನ್ನು ಕುರಿತು ಚೆನ್ನಾಗಿ ಆಲೋಚನೆ ಮಾಡಿದೆನು. ನನ್ನ ಸಂಗತಿಯನ್ನು ಹೇಳುವುದಕ್ಕೆ

ಮೊದಲು, ಅಕೋ ಆ ಮಾಲತೀ ಲತೆಯ ವೇದಿಕೆಯಲ್ಲಿರುವ ಚಂದ್ರಶಿಲೆಯ ಮೇಲೆ ನನ್ನ ತಂಗಿ ನೀರದೆ ಕುಳಿತಿದ್ದಾಳೆ. ನೀವು ದಯಮಾಡಿ ಒಂದು ಸಾರಿ ಹೋಗಿ ಅವಳನ್ನು ನೋಡಿ ಮಾತನಾಡಿಸಿ ಬನ್ನಿ" ಎಂದಳು.



ಪದ್ಮಕೇತು ಅವಳು ತೋರಿಸಿದ ಕಡೆಗೆ ಹೋದನು. ಅಲ್ಲಿ ಚಂದ್ರಶಿಲೆಯ ಮೇಲೆ ಕುಳಿತಿದ್ದ ನೀರದೆ ಹೂವಿನ ಮಾಲೆ ಹೆಣೆದುಕೊಂಡಿದ್ದಳು. ಅವಳನ್ನು ನೋಡಿದ ಕೂಡಲೇ ಪದ್ಮಕೇತು ಅವಳ ಸೌಂದರ್ಯದ ಆಕರ್ಷಣೆಗೆ ಅತ್ಯಂತ ಪರವಶನಾಗಿ ಹೋದನು. ನರ್ಮದೆಯ ನೆನಪೇ ಇಲ್ಲದೆ ಅವಳ ಬಳಿಗೆ ಹೋಗಿ "ಸುಂದರೀ!" ಎಂದು ಮೆಲ್ಧ್ವನಿಯಿಂದ ಕರೆದನು.

ತಲೆಯೆತ್ತಿ ಅವನನ್ನು ನೋಡಿದ ನೀರದೆ, ಸಂಭ್ರಮಾಶ್ಚರ್ಯಗಳಿಂದ ಮೂಕಳಂತಾದಳು.

ಪದ್ಮಕೇತು ಮುಗುಳು ನಗುವನ್ನು ಅರಳಿಸಿಕೊಂಡು, "ದಿವ್ಯ ಸುಂದರೀಮಣೀ! ನಾನು ಪದ್ಮಕೇತು ಎಂಬ ಹೆಸರಿನ ಗಂಧರ್ವನು. ನಿನ್ನಂತಹ ಸೌಂದರ್ಯವತಿಯರು ನಮ್ಮ ಲೋಕದಲ್ಲಿ ಗಾಳಿಸಿದರೂ ಕಾಣುವಂತಿಲ್ಲ. ನಿನಗೆ ಅಭ್ಯಂತರವೇನಿಲ್ಲದಿದ್ದರೆ ಹೇಳು. ನಿನ್ನನ್ನು ಮದುವೆಯಾಗಿ ಧನ್ಯನಾಗುತ್ತೇನೆ. ನೀನೂ ಗಂಧರ್ವ ಲೋಕದ ದಿವ್ಯ ಸುಖಗಳಿಗೆ ಪಾತ್ರಳಾಗುವಿ" ಎಂದನು.

ಅವನ ಮಾತು ಕೇಳಿ ಉಬ್ಬಿ ತಬ್ಬಿಬ್ಬಾದ ನೀರದೆ ಕೂಡಲೇ ಅವನಿಗೆ ತನ್ನ ಅಂಗೀಕಾರವನ್ನು ತಿಳಿಸಿಬಿಟ್ಟಳು. ಅದನ್ನು ತಿಳಿದು ಪದ್ಮಕೇತು ಗಾಂಧರ್ವ ವಿಧಿಯಿಂದ ಅವಳನ್ನು ಈಗಲೇ ಮದುವೆ ಮಾಡಿಕೊಳ್ಳುವೆನೆಂದು ಹೇಳಿದನು.

ನೀರದೆ ಆ ಬಗೆಯ ವಿವಾಹಕ್ಕೆ ಒಪ್ಪಿಕೊಳ್ಳದೆ, "ಇಂತಹ ವಿವಾಹದಿಂದ ನನ್ನ ಮದುವೆ ಯಾರಿಗೂ ತಿಳಿಯದೆ ರಹಸ್ಯವಾಗಿಯೇ ಇದ್ದುಬಿಡುತ್ತದೆ. ನನ್ನ ಮದುವೆ ಒಳ್ಳೆಯ ವೈಭವದಲ್ಲಿ ಎಲ್ಲರ ಮುಂದೆ ಆಗಬೇಕೆಂಬುದು ನನ್ನ ಅಪೇಕ್ಷೆ. ಕಲ್ಯಾಣ ಮಂಟಪದಲ್ಲಿ ಶುಭ ಮುಹೂರ್ತದಲ್ಲಿ ನಿಮ್ಮನ್ನು ಮದುವೆ ಮಾಡಿಕೊಳ್ಳಲಿಚ್ಛಿಸುತ್ತೇನೆ" ಎಂದಳು.

ಅವಳ ಇಷ್ಟದಂತೆಯೇ ಆಗಲು ಪದ್ಮಕೇತು ಒಪ್ಪಿದನು. ಇನ್ನೊಮ್ಮೆ ಬರುತ್ತೇನೆಂದು ಹೇಳಿ ಪದ್ಮಕೇತು ಹೊರಟುಹೋದ ಮೇಲೆ, ನೀರದೆ ಅತ್ಯಾನಂದದಿಂದ ಅಂತಃಪುರಕ್ಕೆ ಹೋಗಿ ಸೇರಿದಳು. ಅಲ್ಲಿ ನರ್ಮದೆಯೊಂದಿಗೆ ನಡೆದ ಸಮಾಚಾರವನ್ನೆಲ್ಲಾ ಹೇಳಿ ಆನಂದದಲ್ಲಿ ಪರವಶಳಾದಳು.

ಆದರೆ ನರ್ಮದೆ ತಂಗಿಯ ಮಾತಗಳನ್ನು ಕೇಳಿ ಸಂತೋಷಿಸುವುದಕ್ಕೆ ಬದಲಾಗಿ, "ತಂಗೀ ನೀರದಾ, ನಡೆದುದೆಲ್ಲಾ ನನಗೆ ಗೊತ್ತಿದೆ. ಈ ವಿಷಯದಲ್ಲಿ ನಿನಗೊಂದು ಸಲಹೆಯನ್ನು ಮಾಡಬೇಕೆಂದಿದ್ದೇನೆ" ಎಂದಳು.



ನೀರದೆ ಅಕ್ಕನ ಮಾತು ಕೇಳಿ ಸಲಹೆ ಕೇಳಲು ಇಷ್ಟವಿಲ್ಲದವಳಂತೆ, "ಏನದು ?" ಎಂದಳು.

"ಆ ಪದ್ಮಕೇತು, ಮೊದಲು ನನ್ನನ್ನು ನೋಡಿ ಮದುವೆ ಮಾಡಿಕೊಳ್ಳುತ್ತೇನೆ ಎಂದ. ಅವನ ಮೇಲೆ ನನಗೆ ನಂಬುಗೆ ಇಲ್ಲದೆ, ಅವನನ್ನು ಪರೀಕ್ಷಿಸಲಿಕ್ಕಾಗಿ ನಿನ್ನನ್ನು ತೋರಿಸಿದೆನು. ನಿನ್ನನ್ನು ನೋಡಿದ ಕೂಡಲೇ ನನ್ನನ್ನು ಪೂರ್ತಿ ಮರೆತು ನಿನ್ನನ್ನು ಮದುವೆಯಾಗುತ್ತೇನೆ ಅಂದನು. ಇದರಿಂದ ಆ ಗಂಧರ್ವನು ಎಂತಹ ಚಪಲಚಿತ್ತನೆಂದು ಗೊತ್ತಾಗುತ್ತದೋ ಇಲ್ಲವೋ ? ಅಂಥವನನ್ನು ನಂಬುವುದು ಒಳ್ಳೆಯದಲ್ಲ. ಅಂತಹವನನ್ನು ಮದುವೆಯಾಗಿ ನಿನ್ನ ಜೀವಿತವನ್ನು ನಾಶಮಾಡಿಕೊಳ್ಳಬೇಡ" ಎಂದಳು ನರ್ಮದೆ.

ಅಕ್ಕ ಹೇಳಿದ ಮಾತು ಕೇಳಿ ನೀರದೆ ಹಗುರಾಗಿ ನಕ್ಕು "ಗಂಧರ್ವನಂತಹ ದಿವ್ಯ ಪುರುಷನು ಮದುವೆಯಾಗುವೆನೆಂದು ಬಂದರೆ ಬೇಡ ಎನ್ನುವುದುಂಟೆ ? ಇದನ್ನೇ ಹಿರಿಯರು ಸಿರಿ ಬರುವೆನೆಂದಾಗ ಬರಬೇಡವೆಂಬಂತೆ ಕಾಲಡ್ಡವಿಡುವುದೇ ಅನ್ನುತ್ತಾರೆ. ವಿಧಿಯ ಬರೆಹವನ್ನು ಯಾರೂ ತಪ್ಪಿಸಲಾರರಲ್ಲವೇ ಅಕ್ಕಾ ? ಇಲ್ಲದ ಹೊಲ್ಲದ ಅನುಮಾನಗಳಿಂದ ಬರುವ ಅದೃಷ್ಟವನ್ನು ಕಾಲಿನಿಂದ ಒದ್ದೋಡಿಸಲಾರೆ" ಎಂದಳು.

ಆಮೇಲೆ ಒಂದು ತಿಂಗಳೊಳಗೆ ನರ್ಮದೆಗೆ ಒಬ್ಬ ಸಾಮಂತನ ಕುಮಾರನೊಂದಿಗೂ, ನೀರದೆಗೆ ಪದ್ಮಕೇತುವಿನೊಂದಿಗೂ ಅತ್ಯಂತ ವೈಭವದಿಂದ ಮದುವೆಗಳು ನಡೆದುವು. ನರ್ಮದೆ ಹಾಯಾಗಿ ಸಂಸಾರ ನಡೆಸಿಕೊಂಡಿದ್ದಳು. ಆದರೆ ನೀರದೆಯ ಸಂಸಾರ ಮಾತ್ರ ಮೂರು ದಿನಗಳ ಮುಚ್ಚಟೆಯಂತೆಯೇ ಆಯಿತು.

ಒಂದು ದಿನ ಅವಳನ್ನು ಬಿಟ್ಟು ಹೋದ ಗಂಧರ್ವನು ಮತ್ತೆ ಬರಲೇ ಇಲ್ಲ. ನೀರದೆ ಬಾಧೆಯಿಂದಲೂ, ಅವಮಾನದಿಂದಲೂ ಕಂದಿ ಕುಂದಿ ಹೋದಳು. ತಂಗಿಯ ಪರಿಸ್ಥಿತಿಯನ್ನು ನೋಡಿ ನರ್ಮದೆಯೂ ಸಂಕಟಪಡತೊಡಗಿದಳು.

ಹೀಗಿರುವಾಗ ಅವರಿರುವ ಊರಿಗೆ ಕರವೀರ ರಾಜ್ಯದಲ್ಲಿ ಮಹಾ ತಪಶ್ಶಾಲಿಯೆಂದು ಹೆಸರು ಪಡೆದ ಜ್ಞಾನಶಿಖನೆಂಬ ಯೋಗಿ ಬಂದನು. ಆವನ ಮೂಲಕ ಒಳ್ಳೆಯ ಪರಿಹಾರವೇನಾದರೂ ಪಡೆಯೋಣವೆಂದು ನರ್ಮದೆ ತಂಗಿಯನ್ನು ಕರೆದುಕೊಂಡು ಆತನ ದರ್ಶನಕ್ಕೆ ಹೋದಳು.

ಜ್ಞಾನಶಿಖನು ನರ್ಮದೆ ಹೇಳಿದುದನ್ನೆಲ್ಲಾ ಕೇಳಿ, "ನರ್ಮದಾ, ನೀನು ಸ್ವಾರ್ಥ ಬುದ್ಧಿಯಿಂದ ಬಹಳ ಬುದ್ಧಿವಂತಿಕೆಯನ್ನು ಪ್ರದರ್ಶಿಸಿರುವೆ" ಎಂದನು ಅವಳನ್ನೇ ತೀವ್ರ ದೃಷ್ಟಿಯಿಂದ ನೋಡುತ್ತ.

ನರ್ಮದೆಗೆ ಏನು ಉತ್ತರ ಕೊಡಬೇಕೆಂದು ಗೊತ್ತಾಗದೆ, ತಲೆ ಬಗ್ಗಿಸಿಕೊಂಡಳು.

ಆಮೇಲೆ ಜ್ಞಾನಶಿಖನು ನೀರದೆಯೊಂದಿಗೆ,

"ಅಮ್ಮಾ, ನಿನಗೆ ಒಂದು ಮಂತ್ರವನ್ನು ಉಪದೇಶಿಸುತ್ತೇನೆ. ಅದನ್ನು ಜಪಿಸುತ್ತ ಶಕ್ತಿಸ್ವರೂಪಿಣಿಯಾದ ಪಾರ್ವತೀ ದೇವಿಯನ್ನು ಉಪಾಸನೆ ಮಾಡು. ನಿನ್ನ ಸಂಸಾರವು ಸುಗಮವಾಗುತ್ತದೆ" ಎಂದು ಅವಳಿಗೆ ಕ್ರಮಗಳನ್ನು ತಿಳಿಸಿ ಮಂತ್ರೋಪದೇಶ ಮಾಡಿದನು.

ಕೆಲವೇ ದಿನಗಳಲ್ಲಿ ನೀರದೆಯ ಉಪಾಸನೆ ಫಲಿಸಿತು. ಪದ್ಮಕೇತು ಅವಳ ಬಳಿಗೆ ಬಂದು ಬಿಟ್ಟನು. ಅಲ್ಲದೆ ಅವಳ ಮೇಲೆ ಇಮ್ಮಡಿ ಪ್ರೇಮಾಭಿಮಾನಗಳಿಂದ ನೋಡತೊಡಗಿದನು.

ಬೇತಾಳವು ಈ ರೀತಿ ಕಥೆಯನ್ನು ಮುಗಿಸಿ, "ರಾಜಾ, ತನ್ನನ್ನು ಮದುವೆಯಾಗಲು ಬಂದ ಗಂಧರ್ವನನ್ನು ತಂಗಿ ಮದುವೆಯಾದರೂ ಸಂಕಟಪಡದಿದ್ದವಳು ನರ್ಮದೆ. ಅಂತಹವಳನ್ನು ಸ್ವಾರ್ಥಿಯಾದಳೆಂದು ಜ್ಞಾನಶಿಖನು ನಿಂದಿಸಿದ್ದಾನೆ. ಇದು ನ್ಯಾಯವಿರುದ್ಧವೆಂದು ಅನಿಸುತ್ತದೋ ಇಲ್ಲವೋ? ಇದಕ್ಕೆ ಸರಿಯಾದ ಉತ್ತರ ತಿಳಿದು ಕೂಡಾ ಹೇಳದೇ ಹೋದರೆ ನಿನ್ನ ತಲೆ ಒಡೆದು ಚೂರು ಚೂರಾಗುತ್ತದೆಂದು ತಿಳಿ!" ಎಂದು ಹೇಳಿ ಸುಮ್ಮನಾಯಿತು.

ಆದಕ್ಕೆ ತ್ರಿವಿಕ್ರಮನು ಹೀಗೆಂದನು: "ಆ ಅಕ್ಕ ತಂಗಿಯರಲ್ಲಿ ನೀರದೆ ಸ್ವಭಾವತಃ ಮುಗ್ಧಳು, ಸರಳ ಗುಣದವಳು. ಆಕಾಂಕ್ಷೆಗಳನ್ನು ಅಡಗಿಸಿಟ್ಟುಕೊಳ್ಳುವುದು ಅವಳಿಂದಾಗದು. ಆದಕ್ಕಾಗಿ ಅವಳ ಮೇಲೆ ಕನಿಕರ ತೋರಿಸಬೇಕೇ ಹೊರತು ದ್ವೇಷಿಸುವುದು ಸರಿಯಲ್ಲ. ಇನ್ನು ನರ್ಮದೆಯ ಸಂಗತಿ, ಅವಳು ಅತ್ಯಂತ ಬುದ್ಧಿವಂತೆ. ಆದುದರಿಂದಲೇ ಅವಳು ಪದ್ಮಕೇತುವಿಗೆ ತನ್ನ ಸಮ್ಮತಿ ತಿಳಿಸುವ ಮೊದಲು, ಅವನ ಸ್ವಭಾವವನ್ನು ತಿಳಿಯಲಿಕ್ಕಾಗಿ ತನ್ನ ಸ್ವಂತ ತಂಗಿಯನ್ನೇ ಎರೆಯಾಗಿ ಉಪಯೋಗಿಸಿಕೊಂಡಳು! ಅವನು ನೀರದೆಯ ಮೇಲೆ ಆಕರ್ಷಿತನಾಗಬಹುದೆಂದೂ, ನೀರದೆ ಕೂಡಾ ಅವನನ್ನು ಮದುವೆಯಾಗಲು ಒಪ್ಪಬಹುದೆಂದೂ ನರ್ಮದೆ ಊಹಿಸಿದ್ದಾಳೆ. ಒಂದು ವೇಳೆ ಪದ್ಮಕೇತು ಚಪಲಚಿತ್ತನಾದರೆ ಅವನನ್ನು ಮದುವೆಯಾಗಿ ತಾನು ಎಂತಹ ಸಂಕಟಕ್ಕೆ ಗುರಿಯಾಗುವೆನೋ, ಅದೇ ಸಂಕಟವನ್ನು ತನ್ನ ತಂಗಿ ಕೂಡಾ ಅನುಭವಿಸುವಳೆಂಬ ಸಂಗತಿ ಅವಳಿಗೆ ಗೊತ್ತೇ ಇತ್ತು. ಆದ್ದರಿಂದಲೇ ಜ್ಞಾನಶಿಖನು ಅವಳನ್ನು ಸ್ವಾರ್ಥಪರಳೆಂದು ನಿಂದಿಸಿದನು. ಇದರಲ್ಲಿ ಅವನು ಅನ್ಯಾಯವಾಗಿ ಪ್ರವರ್ತಿಸಿದನೆನ್ನಲು ಸಾಧ್ಯವಿಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಎಂದಿನಂತೆ ಮರದ ಕೊಂಬೆಯಲ್ಲಿ ನೇತಾಡಿತು.





# ಒಳ್ಳೇ ಯಜಮಾನ

ವಿರಿಂಚಿ ಪಟ್ಟಣದ ರಾಜಬೀದಿಯಲ್ಲಿ ವರದರಾಜನೆಂಬವನು ಹೊಸದಾಗಿ ಒಂದು ಜೀನಸಿನಂಗಡಿಯನ್ನು ಪ್ರಾರಂಭಿಸಿದನು. ತನ್ನ ಅಂಗಡಿಯಲ್ಲಿ ತನಗೆ ಸಹಾಯಕನಾಗಿರಲು ಒಬ್ಬ ಕೆಲಸದ ಆಳಿಗಾಗಿ ಹುಡುಕತೊಡಗಿದನು.

ಹೀಗೆ ವರದರಾಜನಿಗೆ ಒಬ್ಬ ಕೆಲಸದಾಳು ಬೇಕೆಂಬ ಸಂಗತಿ ಜೋಗಣ್ಣನೆಂಬವನಿಗೆ ತಿಳಿಯಿತು. ವ್ಯಾಪಾರ ಕಾರ್ಯಗಳಲ್ಲಿ ಬಹಳ ಜಾಣನಾದ ಜೋಗಣ್ಣನು ಭೋಜಯ್ಯನ ಅಂಗಡಿಯಲ್ಲಿ ಕೆಲಸಕ್ಕಿರುವವನು. ಯಾಕೋ ಅಲ್ಲಿರಲು ಅವನಿಗೆ ಇಷ್ಟವಿರಲಿಲ್ಲ.

ಒಂದು ದಿನ ಜೋಗಣ್ಣ ವರದರಾಜನ ಬಳಿಗೆ ಬಂದು, ತನ್ನ ಹೆಸರನ್ನು ಹೇಳಿ ತಾನು ಈ ಹೊಸ ಅಂಗಡಿಯಲ್ಲಿ ಕೆಲಸ ಕೇಳಲು ಬಂದಿದ್ದೇನೆಂದು ಹೇಳಿದನು. ವರದರಾಜನು ಅವನನ್ನು ಪರೀಕ್ಷಿಸಿ ನೋಡಿ, " ಈಗ ಎಲ್ಲಿ ಕೆಲಸ ಮಾಡಿಕೊಂಡಿರುವಿ ? " ಎಂದು ಪ್ರಶ್ನಿಸಿದನು.

ಅದಕ್ಕೆ ಜೋಗಣ್ಣ ತಾನು ಭೋಜಯ್ಯನ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದೇನೆಂದು ಹೇಳಿ, " ಕೆಲಸಗಳಲ್ಲಿ ಒಳ್ಳೆಯ ತರಬೇತಿ ಪಡೆದಿದ್ದೇನೆ. ನೀವು ನನಗೆ ಅಲ್ಲಿಗಿಂತ ಹತ್ತು ರೂಪಾಯಿ ಸಂಬಳ ಹೆಚ್ಚಿಗೆ ಕೊಟ್ಟರೆ ನಿಮ್ಮ ಅಂಗಡಿಯಲ್ಲಿ ಕೆಲಸ ಮಾಡುತ್ತೇನೆ " ಎಂದನು.

ವರದರಾಜನು ಸ್ವಲ್ಪಹೊತ್ತು ಆಲೋಚನೆ ಮಾಡಿ, " ನಿನ್ನನ್ನು ಕೆಲಸಕ್ಕೆ ಇಟ್ಟುಕೊಳ್ಳಲು ನಾನು ಸಿದ್ಧನೇ. ಆದರೆ ನೀನು ಭೋಜಯ್ಯನ ಹತ್ತಿರ ಈಗ ಮಾಡುವ ಕೆಲಸವನ್ನು ಏಕೆ ಬಿಡಬೇಕೆಂದಿರುವಿ ಎಂಬುದನ್ನು ಸತ್ಯವಾಗಿ ಹೇಳಬೇಕು, ಸಂಬಳದಲ್ಲಿ ಹತ್ತು ರೂಪಾಯಿ ಹೆಚ್ಚಿಗೆ ಬೇಕೆಂಬುದಕ್ಕಾಗಿ ನೀನು ಅಲ್ಲಿಯ ಕೆಲಸ ಬಿಡುವುದನ್ನು ನಾನು ನಂಬುವುದಿಲ್ಲ. ಏಕೆಂದರೆ ಆ ಹತ್ತು ರೂಪಾಯಿ ಅವರೇ ಕೊಡದಿರಲಿಕ್ಕಿಲ್ಲ " ಎಂದನು.

" ಅಯ್ಯಾ, ಇದರಲ್ಲಿ ಮುಚ್ಚುಮರೆ ಏಕೆ ? ಭೋಜಯ್ಯನವರ ಹತ್ತಿರ ಕೆಲಸ ಮಾಡುವುದೆಂದರೆ ಕತ್ತಿಯ ಮೇಲೆ ಸಾಮು ಮಾಡಿದ ಹಾಗೆ. ಊಂ ಎಂದರೂ ಅಂ ಎಂದರೂ ಅವರಿಗೆ ಅಪರಾಧವಾಗಿಯೇ ಕಾಣುತ್ತದೆ. ನಾನು ಮಾಡುವ ಉದ್ಯೋಗವು ಸೀನಿದರೆ ಮೂಗೇ ಕಿತ್ತು ಬೀಳುವ

ಕಮಲಿನಿ

ಹಾಗೆ ಇರುವಂಥಾದ್ದು. ಸಹನೆಗೂ ಮಿತಿ ಇದೆ ಯಷ್ಟೆ?" ಎಂದನು ಜೋಗಣ್ಣ.

ವರದರಾಜನು ಅವನಿಗೆ ಕೆಲಸ ಕೊಡುವುದೋ ಬಿಡುವುದೋ ಎಂಬುದನ್ನು ಆಮೇಲೆ ಹೇಳುತ್ತೇನೆಂದು ಹೇಳಿ ಅವನನ್ನು ಕಳುಹಿಸಿಬಿಟ್ಟನು. ಅನಂತರ ಆಗಲೇ ಹೊರಟು ಭೋಜಯ್ಯನ ಬಳಿಗೆ ಹೋಗಿ, ಆತನೊಂದಿಗೆ, "ನಿಮ್ಮ ಅಂಗಡಿಯಲ್ಲಿ ಕೆಲಸಕ್ಕಿರುವ ಜೋಗಣ್ಣನಿಗೆ ಹೆಣ್ಣು ಕೊಡಬೇಕೆಂದು ನಮ್ಮ ಕಡೆಯ ಒಬ್ಬರು ಬಂದಿದ್ದಾರೆ. ಅವನ ಬಗ್ಗೆ ನಿಮಗೆ ತಿಳಿದಿರುವ ಮಾಹಿತಿಯನ್ನು ಸ್ವಲ್ಪ ಹೇಳಬೇಕು" ಎಂದನು.

ಆದನ್ನು ಕೇಳಿ ಭೋಜಯ್ಯ, "ಜೋಗಣ್ಣ ಒಳ್ಳೆಯ ಮಿಂಚಿನಂಥ ಹುಡುಗ. ಒಳ್ಳೇ ನಂಬಿಗಸ್ಥ. ಅವನು ಬಹಳ ದಿನಗಳಿಂದ ನನ್ನ ವ್ಯಾಪಾರ ಕಾರ್ಯಗಳಲ್ಲಿ ನನಗೆ ಬಲಗೈಯ ಹಾಗಿದ್ದಾನೆ. ಇದನ್ನು ನಾನು ಹೇಳಿದೆನೆಂದು ಆ ಹೆಣ್ಣು ಕೊಡಲು ಬಂದ ದೊಡ್ಡವರೊಂದಿಗೆ ಹೇಳಿರಿ" ಎಂದನು.

ಅದನ್ನು ಕೇಳಿದ ವರದರಾಜನು ನಗುತ್ತ, "ಜೋಗಣ್ಣನನ್ನು ನೀವು ಅಭಿಮಾನಿಸಿಕೊಂಡು ಹೊಗಳುವಿರಿ. ಆದರೆ ಅವನು ಮಾತ್ರ ನಿಮ್ಮ ಹತ್ತಿರ ಕೆಲಸ ಮಾಡುವುದೆಂದರೆ ಸುಲಭವಲ್ಲವೆಂದೂ, ಕತ್ತೀ ಮೇಲೆ ಸಾಮು ಮಾಡಿದ ಹಾಗೆಂದೂ ಹೇಳುತ್ತಾನೆ. ನೀವು ಕೊಡುವ ಸಂಬಳಕ್ಕಿಂತ ಹತ್ತು ರೂಪಾಯಿ ಹೆಚ್ಚು ಕೊಟ್ಟರೆ ನನ್ನ ಹತ್ತಿರ ಕೆಲಸಕ್ಕೆ ಸೇರುತ್ತೇನಂತಲೂ ಹೇಳುತ್ತಾನೆ. ನಾನೊಂದು ಹೊಸ ಅಂಗಡಿ ಪ್ರಾರಂಭಿಸಿ ಆಳಿಗಾಗಿ ನೋಡಿಕೊಂಡಿದ್ದೇನೆ" ಎಂದನು.

"ಹಾಗಾದರೆ ನಿಮ್ಮ ಊರಿನವರಾರೋ ಅವನಿಗೆ ಹೆಣ್ಣು ಕೊಡುತ್ತೇವೆಂದು ಬಂದದ್ದು, ಸುಮ್ಮನೆ ನೀವಾಗಿ ಕಲ್ಪಿಸಿ ಹೇಳಿದಿರೇನು?" ಎಂದು ಭೋಜಯ್ಯ ಕೋಪದಿಂದ ಕೇಳಿದನು.

"ಜೋಗಣ್ಣನನ್ನು ಕುರಿತು ನಿಜಸಂಗತಿ ತಿಳಿಯಲಿಕ್ಕಾಗಿ ನಿಮ್ಮೊಂದಿಗೆ ಹಾಗೆ ಹೇಳಿದೆ. ಅವನಿಗೆ ನಿಮ್ಮ ಮೇಲೆ ಸ್ವಲ್ಪ ಕೂಡಾ ಒಳ್ಳೆಯ ಅಭಿಪ್ರಾಯ



ವಿಲ್ಲವೆಂದು ನಿಮಗೆ ಕೂಡಾ ಈಗ ಸ್ಪಷ್ಟವಾಗಿ ತಿಳಿಯಿತಷ್ಟೆ ? " ಎಂದನು ವರದರಾಜ.

ಆ ಮಾತು ಕೇಳಿ ಭೋಜಯ್ಯ ವರದರಾಜನನ್ನು ದುರುದುರು ನೋಡುತ್ತ, "ನೀವು ತಿಳಿದುಕೊಳ್ಳ ಬೇಕೆಂದಿರುವುದು ಜೋಗಣ್ಣನ ಮೇಲೆ ನನ್ನ ಅಭಿಪ್ರಾಯವೇನೆಂಬುದನ್ನು ತಾನೇ ? ಅದನ್ನಂತೂ ನಿಮಗೆ ಸ್ಪಷ್ಟವಾಗಿ ಹೇಳಿಬಿಟ್ಟಿದ್ದೇನೆ. ಆದರೆ ನೀವು ಮಾತ್ರ ಜೋಗಣ್ಣನಿಗೆ ನನ್ನ ಮೇಲಿರುವ ಅಭಿಪ್ರಾಯವೇನೆಂದು ನಾನು ಕೇಳದೆಯೇ ಹೇಳಿದ್ದೀರಿ. ಅವನು ನನ್ನನ್ನು ಕುರಿತು ಏನೇ ಅಂದುಕೊಂಡಿದ್ದರೂ ಅವನ ವಿಷಯದಲ್ಲಿ ನನಗಿರುವ ಅಭಿಪ್ರಾಯದಲ್ಲಿ ಯಾವ ಬದಲಾವಣೆಯೂ ಬಾರದು. ಮೊದಲು ಹೇಳಿದ್ದೇ ನಿಜ" ಎಂದನು.

"ನಿಮ್ಮ ರೀತಿ ನನಗೆ ಬಹಳ ಆಶ್ಚರ್ಯವಾಗಿದೆ" ಎಂದನು ವರದರಾಜ.

"ಇದರಲ್ಲಿ ಆಶ್ಚರ್ಯಪಡುವಂತಹುದೇನೂ ಇಲ್ಲ. ನಿಮಗೆ ಅಷ್ಟೊಂದು ಕೆಲಸದಾಳಿನ ಅಗತ್ಯವಿದ್ದರೆ ಆ ಜೋಗಣ್ಣನಿಗೆ ನನಗಿಂತ ಹತ್ತಲ್ಲದಿದ್ದರೆ ಇಪ್ಪತ್ತು ಹೆಚ್ಚಿಗೆ ಸಂಬಳ ಕೊಟ್ಟು ಇಟ್ಟುಕೊಳ್ಳಿ. ನನ್ನಿಂದ ಯಾವ ಅಭ್ಯಂತರವೂ ಇಲ್ಲ. ಕೆಲಸದಲ್ಲಿ ಬಹಳ ಚುರುಕಾಗಿರುತ್ತಾನೆ. ನಂಬಿಕಸ್ಥನೂ ನಿಜ. ಇದು ನನ್ನ ದೃಢವಾದ ಅಭಿಪ್ರಾಯವಾಗಿದೆ. ಯಾವ ಬದಲಾವಣೆಯೂ ಇಲ್ಲ" ಎಂದು ಭೋಜಯ್ಯನು ವರದರಾಜನನ್ನು ನಿಂದಿಸುವ ರೀತಿಯಲ್ಲೇ ಹೇಳಿದನು.

ವರದರಾಜನು ಮತ್ತೇನೂ ಮಾತಾಡದೆ ತಲೆ ತಗ್ಗಿಸಿಕೊಂಡು ಅಲ್ಲಿಂದ ಹೊರಟುಹೋದನು.

ಅಂಗಡಿಯ ಬಾಗಿಲ ಹತ್ತಿರವಿದ್ದು ಈ ಸಂಭಾಷಣೆಯನ್ನೆಲ್ಲಾ ಕೇಳಿಸಿಕೊಂಡಿದ್ದ ಜೋಗಣ್ಣ ಒಳಗೆ ಬಂದ ಕೂಡಲೇ ಭೋಜಯ್ಯನ ಕಾಲಿನ ಮೇಲೆ ಅಡ್ಡಬಿದ್ದು, "ಅಯ್ಯಾ, ಒಬ್ಬರ ವಿಶ್ವಾಸವನ್ನೂ, ಅಭಿಮಾನವನ್ನೂ ಸಂಪಾದಿಸುವುದಕ್ಕಿಂತ ಹೆಚ್ಚಿನದಾದ ಆರ್ಜನೆ ಇಲ್ಲವೆಂದು ಈಗ ತಿಳಿದುಕೊಂಡೆನು. ಆಗತ್ಯಗಳಿಗೂ, ಪರಿಸ್ಥಿತಿಗಳಿಗೂ ಅನುಗುಣವಾಗಿ ಅಭಿಪ್ರಾಯ ಬದಲಾವಣೆ ಮಾಡಿಕೊಂಡು ಬದುಕು ಸಾಗಿಸಬಹುದೆಂದುಕೊಳ್ಳುವ ನನ್ನಂಥವರಿಗೆ ನೀವು ಒಳ್ಳೆಯ ಬುದ್ಧಿ ಕಲಿಸಿದಿರಿ. ನನ್ನನ್ನು ಕ್ಷಮಿಸಿರಿ" ಎಂದನು.

ಆಮೇಲೆ ಜೋಗಣ್ಣನು ಭೋಜಯ್ಯನ ಅಂಗಡಿಯಲ್ಲೇ ಅನೇಕ ವರ್ಷಗಳವರೆಗೆ ನಂಬುಗೆಯಿಂದ ಕೆಲಸ ಮಾಡಿದನು. ಅದರಿಂದಾಗಿ ವ್ಯಾಪಾರದಲ್ಲಿ ಅನೇಕ ಸೂಕ್ಷ್ಮ ವಿಷಯಗಳು ಅವನಿಗೆ ತಿಳಿದುವು. ಭೋಜಯ್ಯನ ಪ್ರೋತ್ಸಾಹದಿಂದ ಅವನೇ ಸ್ವಂತವಾಗಿ ವ್ಯಾಪಾರ ಮಾಡಲು ಪ್ರಾರಂಭಿಸಿ ಅಭಿವೃದ್ಧಿಗೂ ಬಂದನು.






ನಮ್ಮ ದೇವಾಲಯಗಳು:

# ತಿರುಪತಿ

ಒಂದು ಸಾರಿ ನಾರದನು ಮಹಾ ವಿಷ್ಣುವನ್ನು ದರ್ಶನಮಾಡಿ, ಭರತಖಂಡದ ಪೂರ್ವ ಭಾಗದ ಕಣಿವೆಗಳಲ್ಲಿ ಬೆಳಗುವ ಶೇಷಾಚಲವೆಂಬ ಏಳು ಬೆಟ್ಟಗಳ ವರಿಸೆಯ ಪ್ರಕೃತಿ ಸೌಂದರ್ಯವನ್ನು ತುಂಬಾ ಹೇಳಿದನು.

ಕೆಲವು ದಿನಗಳ ಮೇಲೆ ವಿಷ್ಣು ಪರಿಸರಗಳ ಬದಲಾವಣೆಗಾಗಿ ಶೇಷಾಚಲದ ಮೇಲೆ ಬಂದು ಇಳಿದನು. ಅದ್ಭುತವಾದ ಅಲ್ಲಿಯ ಪ್ರಕೃತಿ ಸೌಂದರ್ಯವನ್ನು ನೋಡಿ ಬಹಳ ಸಂತೋಷ ಪಟ್ಟನು. ಒಂದು ಬಂಡೆಯ ಮೇಲೆ ಕುಳಿತು ಕೊಂಡು ಧ್ಯಾನದಲ್ಲಿ ಮಗ್ನನಾದನು.





ಸ್ವಲ್ಪ ಕಾಲದ ಮೇಲೆ ವಿಷ್ಣು ಆ ಸ್ಥಳವನ್ನು ಬಿಟ್ಟು ಹೊರಟು ಹೋದ ಮೇಲೆ ಕೂಡಾ ಆ ಬಂಡೆಯ ಮೇಲೆ ಅವನ ವಿಗ್ರಹದ ರೂಪವು ಸ್ಥಿರವಾಗಿ ಉಳಿದು ಬಿಟ್ಟಿತು. ಆ ವಿಗ್ರಹದಲ್ಲಿ ವಿಷ್ಣುವಿನ ಅಂಶವೂ ಹಾಗೆಯೇ ಉಳಿದಿತ್ತು. ಕಾಲಕ್ರಮದಲ್ಲಿ ಆ ವಿಗ್ರಹದ ಸುತ್ತಲೂ ಮರ ಗಿಡಗಳೂ ಹುತ್ತಗಳೂ ವಿಪರೀತವಾಗಿ ಬೆಳೆದುವು.




ಆ ಪ್ರಾಂತದಲ್ಲಿ ಪಶುಪಾಲಕನೊಬ್ಬನು. ತನ್ನ ಮಂದೆಯಿಂದ ಒಂದು ಗೋವು ದಿನಾ ಕ್ರಮ ತಪ್ಪದೆ ಒಂದು ಬೆಟ್ಟದ ಮೇಲೆ ಹೋಗಿ ಬರುವುದನ್ನು ಗಮನಿಸಿದನು. ಆ ಗೋವು ಮನೆಯಲ್ಲಿ ಕೊಡಬೇಕಾದ ಹಾಲನ್ನು ಕೊಡುತ್ತಿರಲಿಲ್ಲ. ಅದರ ಗುಟ್ಟು ತಿಳಿದುಕೊಳ್ಳಬೇಕೆಂದು ಪಶುಪಾಲಕನು ಒಂದು ದಿನ ಅದನ್ನು ಬೆಂಬತ್ತಿ ಹೋದನು.

ಆ ಗೋವು ಬೆಟ್ಟ ಹತ್ತಿ ಒಂದು ಪೊದರಿನ ಮೇಲೆ ನಿಂತ ಕೂಡಲೇ ಅದರ ಕೆಚ್ಚಲಿನಿಂದ ಹುತ್ತದೊಳಗಿನ ವಿಗ್ರಹದ ಮೇಲೆ ಹಾಲು ಧಾರೆಧಾರೆಯಾಗಿ ಸುರಿಯುವುದನ್ನು ನೋಡಿದ ಪಶುಪಾಲಕನು, ಅತ್ಯಾಶ್ಚರ್ಯಪಟ್ಟು, ಗೋವಿನ ಬಳಿಗೆ ಹೋಗಲು ಧೈರ್ಯವಿಲ್ಲದೆ ಓಡುತ್ತಾ ಬೆಟ್ಟವನ್ನು ಇಳಿದನು.





ಪಶುಪಾಲಕನು ತಾನು ನೋಡಿದ ವಿಷಯವನ್ನು ರಾಜನೊಂದಿಗೆ ಹೇಳಿದನು. ರಾಜನು ಬೆಟ್ಟದ ಮೇಲಕ್ಕೆ ಹೋಗಿ ಹುತ್ತದೊಳಗಿನ ವಿಷ್ಣು ವಿಗ್ರಹವನ್ನು ನೋಡಿದನು. ಪಕ್ಕದಲ್ಲಿದ್ದ ಮತ್ತೊಂದು ಬೆಟ್ಟದ ಶಿಖರದ ಮೇಲೆ ರಾಜನು ಆ ವಿಗ್ರಹವನ್ನು ಪ್ರತಿಷ್ಠೆ ಮಾಡಿ, ಆಲಯವನ್ನು ಕಟ್ಟಿಸಿದನು. ಒಬ್ಬ ದೊಡ್ಡ ಶಿಲ್ಪಿ ಆ ವಿಗ್ರಹವನ್ನು ಇನ್ನಷ್ಟು ಸುಲಕ್ಷಣವಾಗುವಂತೆ ಮಾಡಿದನು.

ಏಳು ಬೆಟ್ಟಗಳ ವೇಂಕಟೇಶ್ವರನೆಂದು ಪ್ರಸಿದ್ಧಿ ಪಡೆದ ವಿಷ್ಣುವನ್ನು ಮದುವೆಯಾಗಲು ಲಕ್ಷ್ಮೀದೇವಿ ಆಕಾಶರಾಜನ ಮನೆಯಲ್ಲಿ ಸೌಂದರ್ಯದ ರಾಶಿಯಾದ ಪದ್ಮಾವತಿದೇವಿಯಾಗಿ ಅವತರಿಸಿದಳು.






ಒಂದು ದಿನ ವೇಂಕಟೇಶ್ವರನು ಮಾನವ ರೂಪದಲ್ಲಿ ಅರಣ್ಯದಲ್ಲಿ ಸಂಚರಿಸಿಕೊಂಡಿದ್ದಾಗ, ಪದ್ಮಾವತಿದೇವಿಯನ್ನು ನೋಡಿದನು. ಆ ದಿವ್ಯ ದಂಪತಿಗಳು ಒಬ್ಬರನ್ನೊಬ್ಬರು ಗುರುತಿಸಿಕೊಂಡು, ತಮ್ಮ ವಿವಾಹವನ್ನು ಭೂಲೋಕದಲ್ಲಿ ಮತ್ತೊಂದು ಸಾರಿ ಮಾಡಿಕೊಂಡರು. ತಿರುಮಲೆಯ ಪಾದತಲದಲ್ಲಿರುವ ಆಲಯದಲ್ಲಿ ಪದ್ಮಾವತಿದೇವಿ ಭಕ್ತರಿಂದ ಪೂಜಿಸಲ್ಪಡುತ್ತ ಇರತೊಡಗಿದಳು.

ನಮ್ಮ ದೇಶದೊಳಗಿನ ಸುಪ್ರಸಿದ್ಧವಾದ ದೇವಾಲಯಗಳಲ್ಲಿ ಪ್ರಧಾನವಾದುದು ತಿರುಪತಿ. ಆಲಯದ ಪುನರ್ನಿರ್ಮಾಣಕ್ಕೆ ನಾಲ್ವರು ರಾಜರು ಕೃಷಿ ಮಾಡಿದ್ದಾರೆ. ಅವರಿಂದ ದೇವಾಲಯದ ಪ್ರಾಂಗಣಗಳು ವಿಸ್ತಾರವಾಗಿವೆ. ಆಲಯದ ಗೋಪುರ ವಿಮಾನವು ಬಂಗಾರದ ತಗಡಿನ ಹೊದಿಕೆ ಹೊಂದಿರುತ್ತದೆ.





ಅನುದಿನವೂ ದೇಶದ ನಾಲ್ಕು ಮೂಲೆಗಳಿಂದಲೂ ಭಕ್ತರು ತಂಡೋಪತಂಡಗಳಾಗಿ ದರ್ಶನಕ್ಕೆ ಬರುತ್ತಾ, ಹುಂಡಿಯಲ್ಲಿ ಕಾಣಿಕೆ ಹಾಕುತ್ತಾ ಇರುತ್ತಾರೆ. ಭಕ್ತರಿಂದ ಬರುವ ನಿಧಿಗಳಿಂದ ಅನೇಕ ವಿದ್ಯಾ ಸಂಸ್ಥೆಗಳೂ, ಆರೋಗ್ಯ ಕೇಂದ್ರಗಳೂ ನಿರ್ವಹಣೆ ನಡೆಸಿಕೊಂಡಿವೆ.

ಸೀತಾರಾಮಲಕ್ಷ್ಮಣರು ಈ ದಿವ್ಯ ಸ್ಥಳದಲ್ಲಿ ವಾಸ ಮಾಡಿರುವರೆಂದು ಪುರಾಣಗಳು ಉಲ್ಲೇಖಿಸುತ್ತವೆ. ಅವರು ವಾಸ ಮಾಡಿದ ಸ್ಥಳವನ್ನು ಸ್ವಾಮಿ ತೀರ್ಥವೆನ್ನುತ್ತಾರೆ. ವಿಷ್ಣು ದಿವಿಯಿಂದ ಭುವಿಗೆ ಇಳಿದ ಸುಂದರ ಶಿಖರದಲ್ಲಿ ವಿಷ್ಣುವಿನ ಪಾದ ಪದ್ಮಗಳನ್ನು ಕೆತ್ತಲ್ಪಟ್ಟ ಒಂದು ಶಿಲಾ ಫಲಕವೂ ಇದೆ.





ಈ ದೇವಾಲಯದ ಸ್ವಾಮಿ ವಿಗ್ರಹವು ದಿವ್ಯ ಪ್ರೇಮವನ್ನು ಸೂಸುವಂತಹ ಮಂದಹಾಸದಿಂದ ಅತ್ಯದ್ಭುತವಾಗಿ ಬೆಳಗುತ್ತದೆ. ವಿಗ್ರಹವೆಲ್ಲಾ ಮಣಿಮಾಣಿಕ್ಯಗಳಿಂದ, ಅಪಾರ ಬೆಲೆ ಬಾಳುವ ಆಭರಣಗಳಿಂದ ಅಲಂಕರಿಸಲ್ಪಟ್ಟಿರುತ್ತದೆ. ಏಳು ಬೆಟ್ಟಗಳೊಡೆಯ ವೇಂಕಟೇಶನ ದರ್ಶನವು ಭಕ್ತಿ ಮುಕ್ತಿದಾಯಕವಾದುದೆಂದು ಭಕ್ತಕೋಟಿಗಳ ವಿಶ್ವಾಸ.



# ಅದೃಷ್ಟ ದೇವತೆ

ಒಂದಾನೊಂದು ಕಾಲದಲ್ಲಿ ಒಬ್ಬ ಬೆಸ್ತನು ಆಫ್ರಿಕಾ ದೇಶದಲ್ಲಿ ವಾಸಮಾಡಿಕೊಂಡಿದ್ದನು. ಅವನು ಯಾವಾಗಲೂ ಒಂದು ದೊಡ್ಡ ಸರೋವರದಲ್ಲಿ ಮೀನು ಹಿಡಿಯುತ್ತಿದ್ದನು. ಅದಕ್ಕಾಗಿ ಅವನು ದೊಡ್ಡ ದೊಡ್ಡ ಅಗಲಗಲವಾದ ಗೆರಸೆ ಬುಟ್ಟಿಗಳನ್ನು ಉಪಯೋಗಿಸುತ್ತಿದ್ದನು. ಅವನು ತನ್ನ ತೆಪ್ಪದಲ್ಲಿ ಆ ಗೆರಸೆ ಬುಟ್ಟಿಗಳನ್ನು ತೆಗೆದುಕೊಂಡು ಹೋಗಿ ಸರಸ್ಸಿನಲ್ಲಿ ಹೆಚ್ಚು ಆಳವಿಲ್ಲದ ಸ್ಥಳದಲ್ಲಿ ಅವುಗಳನ್ನು ಹಗ್ಗ ಕಟ್ಟಿ ಕೆಳಗಿಳಿಸಿ ಬಿಟ್ಟುಬಿಡುವನು. ಹಗ್ಗದ ಕೊನೆಯಲ್ಲಿ ಮರದ ಚಕ್ಕೆಗಳನ್ನು ಕಟ್ಟಿರುವುದರಿಂದ ಬುಟ್ಟಿಗಳು ಎಲ್ಲೆಲ್ಲಿರುವುದೆಂದು ಗೊತ್ತಾಗುತಿತ್ತು. ಮನೆಗೆ ಹೋಗುವಾಗ ಆ ಬುಟ್ಟಿಗಳನ್ನೆಲ್ಲಾ ಮೇಲಕ್ಕೆ ಎಳೆದುಕೊಂಡು ಅವುಗಳಲ್ಲಿ ಸಿಕ್ಕಿಕೊಂಡ ಮೀನುಗಳನ್ನು ಸಂಗ್ರಹಿಸುವನು.

ಒಂದು ದಿನ ಆ ಬೆಸ್ತನು ತನ್ನ ಬುಟ್ಟಿಗಳು ಒಂದೊಂದನ್ನೇ ಸರೋವರದ ತಳದಿಂದ ಮೇಲೆ ಎಳೆದುಕೊಳ್ಳತೊಡಗಿದನು. ಎರಡು ಬುಟ್ಟಿಗಳಲ್ಲಿ ಒಂದು ಮೀನು ಕೂಡಾ ಇರಲಿಲ್ಲ. ಮೂರನೇ ಬುಟ್ಟಿಯಲ್ಲಿ ಚಿಕ್ಕದೊಂದು ಏಡಿ ಮಾತ್ರವೇ ಇದ್ದಿತು. ಅನಂತರ ನಾಲ್ಕನೆಯ ಗೆರಸೆ ಬುಟ್ಟಿಯನ್ನು ಎಳೆಯುವಾಗ ತುಂಬ ಭಾರವಾಗಿ ಮೇಲಕ್ಕೆದ್ದು ಬಂದಿತು. "ಅಮ್ಮಮ್ಮ! ನನ್ನ ಅದೃಷ್ಟ ಹಣ್ಣಾಯಿತಪ್ಪ! ದಾರಿದ್ರ್ಯವೇ ತೀರಿತು!" ಎಂದುಕೊಳ್ಳುತ್ತಾ ಆ ಬುಟ್ಟಿಯನ್ನು ತನ್ನ ತೆಪ್ಪದ ಮೇಲಕ್ಕೆ ಎಳೆದುಕೊಂಡನು. ಅದರಲ್ಲಿ ಒಣಗಿ ಮುದುಡಿದ ಒಬ್ಬಳು ಮುದುಕಿ ಮಾತ್ರ ಇದ್ದಳು.

ಬೆಸ್ತರವನ ಆಶ್ಚರ್ಯವು ಮರುಕ್ಷಣದಲ್ಲಿ ಪರಮ ಅಸಹ್ಯಕ್ಕೆ ತಿರುಗಿತು. ಅವನು ಆ ಮುದುಕಿಯನ್ನು ಮತ್ತೆ ಸರೋವರಕ್ಕೆ ದೂಡಿ ಬಿಡಲು ನೋಡಿದನು. ಆಗ ಅವಳು ಅವನೊಂದಿಗೆ ನಡುಗುವ ಸ್ವರದಲ್ಲಿ, "ಬೇಡಪ್ಪಾ, ನಿನ್ನ ಪುಣ್ಯ! ಮತ್ತೆ ನನ್ನನ್ನು ನೀರಿಗೆ ದೂಡಬೇಡ. ನಿನ್ನೊಂದಿಗೆ ನನ್ನನ್ನು ನಿನ್ನ ಮನೆಗೆ ಕರೆದುಕೊಂಡು ಹೋಗು. ನಿನಗೆ ನನ್ನಿಂದ ನಷ್ಟವಿಲ್ಲ. ಲಾಭವೇ ಬರುತ್ತೆ!" ಎಂದಳು.

"ನಿನ್ನನ್ನು ನನ್ನ ಮನೆಗೆ ಕರೆದುಕೊಂಡು ಹೋಗುವುದೇ? ನನಗೇ ತೂರಿಕೊಳ್ಳಲು ಬಿಲವಿಲ್ಲ, ಕುತ್ತಿಗೆಯಲ್ಲಿ ಡೋಲು ಬೇರೆಯೆ?" ಎಂದನು ಬೆಸ್ತರವನು.

ಆಫ್ರಿಕಾ ಜಾನಪದ ಕಥೆ



ಆದರೆ ಮುದುಕಿ ಅವನ ಕೈಕಾಲು ಬಿದ್ದು ಬೇಡಿಕೊಳ್ಳುತ್ತ ಅವನನ್ನು ಬಿಡಲಿಲ್ಲ ಅವನೊಂದಿಗೆ ಅವನ ಮನೆಗೆ ಹೊರಟಳು. ಅವನು ಇಷ್ಟವಿಲ್ಲದೆಯೇ ತನ್ನ ಕೂಳಿನಲ್ಲಿ ಸ್ವಲ್ಪ ಮುದುಕಿಗೆ ಕೂಡಾ ತಿನ್ನಲು ಕೊಟ್ಟನು. ಇಬ್ಬರೂ ತಿಂದು ಮುಗಿಸಿದ ಮೇಲೆ, ಅವನು, "ನನಗೆ ಏನೋ ಲಾಭವಾಗುತ್ತದೆ ಅಂದೆಯಲ್ಲಾ ? ಮುದಿ ಮುದ್ದೆಯೇ ! ಆ ಲಾಭವೇನೆಂದು ಸ್ಪಷ್ಟವಾಗಿ ಹೇಳಿಬಿಡು. ಕೇಳಿಯಾದರೂ ಸಂತೋಷ ಪಡುತ್ತೇನೆ" ಎಂದನು.

"ನಾಳೆ ಸಾಯಂಕಾಲದೊಳಗೆ ನೀನು ಒಂದು ಪಶುಗಳ ಮಂದೆಗೆ ಯಜಮಾನನಾಗುವಿ. ಅದಕ್ಕಾಗಿ ವಿಶಾಲವಾದ ಪಶುಗಳ ಕೊಟ್ಟಿಗೆಯನ್ನು ತಯಾರಿಸಿಡಪ್ಪಾ" ಎಂದಳು ಮುದುಕಿ.

ಬೆಸ್ತರವನು ಏನೇನೋ ಪ್ರಶ್ನೆಗಳನ್ನು ಮಾಡಿದನು. ಅದಕ್ಕೆಲ್ಲ ಅವಳು ಉತ್ತರ ಕೊಡದೆ "ನಾನು ಹೇಳಿದಷ್ಟು ಮಾಡು" ಎಂದಳು.

ಬೆಸ್ತರವನು ತನ್ನೊಳಗೆ ತಾನು ಗೊಣಗಿಕೊಳ್ಳುತ್ತ, ಶ್ರಮಪಟ್ಟು ಕೊಟ್ಟಿಗೆ ಕಟ್ಟುವ ಕೆಲಸಕ್ಕೆ ತೊಡಗಿದನು. ಸುತ್ತಲೂ ಮುಳ್ಳು ಕೊಂಬೆಗಳನ್ನು ನೆಟ್ಟು ಬಲವಾದ ಬೇಲಿಯನ್ನು ಕಟ್ಟಿದನು. ಆಮೇಲೆ ರಾತ್ರಿಯಾದರೂ ಕೆಲಸಮಾಡಿ ಕೊಟ್ಟಿಗೆಯನ್ನೂ ಕಟ್ಟಿದನು.

ಸೂರ್ಯನು ಮುಳುಗಿ ಸ್ವಲ್ಪ ಹೊತ್ತಿಗೆಲ್ಲಾ ಸರೋವರದ ದಿಕ್ಕಿನಿಂದ ಪಶುಗಳ ಕೂಗು ಕೇಳತೊಡಗಿತು. "ಅಂಬಾ, ಅಂಬಾ" ಎಂಬ ಅನೇಕ ಧ್ವನಿಗಳು ಹತ್ತಿರ ಹತ್ತಿರ ಬಂದಿತು. ಕೊಟ್ಟಿಗೆ ಕಟ್ಟಿ ಮುಗಿಯುವುದಕ್ಕೂ ಪಶುಗಳ ಮಂದೆ ಬಂದು ಕೊಟ್ಟಿಗೆಯೊಳಗೆ ಪ್ರವೇಶಿಸುವುದಕ್ಕೂ ಸರಿಹೋಯಿತು.

ಮೊದಲು ಪ್ರವೇಶಿಸಿದ್ದು ದೊಡ್ಡದೊಂದು ಗೂಳಿ, ಅದರ ಹಿಂದೆ ಅನೇಕ ಹಸುಗಳೂ, ಕರುಗಳೂ. ದೊಡ್ಡದೊಂದು ಗೋವುಗಳ ಮಂದೆಯೇ ತಮ್ಮ ಪಾಡಿಕೆಯ ಕೊಟ್ಟಿಗೆಗೆ ಬಂದ ಹಾಗೆ ಪ್ರವೇಶಿಸಿ ತಮ್ಮ ತಮ್ಮ ಜಾಗದಲ್ಲಿ ಮಲಗುವಂತೆ ಮಲಗಿದುವು.

ಆಗಿನಿಂದ ಬೆಸ್ತನ ಜೀವಿತವು ಪೂರ್ತಿ ಬದಲಾವಣೆ ಹೊಂದಿತು. ಈಗ ಅವನು ಬಡವನೇ ಅಲ್ಲ, ಅದರ ಮೇಲೆ ದೊಡ್ಡ ಧನಿಕನಾಗಿಬಿಟ್ಟನು. ಸುತ್ತುಮುತ್ತಲೂ ಅವನನ್ನು ಮೀರಿಸುವಂತಹ ಧನಿಕರೇ ಇಲ್ಲ ಎಂಬಷ್ಟರಮಟ್ಟಿಗೆ ಮೇಲೇರಿದನು. ಅನೇಕ ಹೊಲಗಳನ್ನು ಕೊಂಡುಕೊಂಡನು. ಮದುವೆ ಮಾಡಿಕೊಂಡು ಗೃಹಸ್ಥನಾದನು. ಆ ಪ್ರಾಂತದಲ್ಲಿರುವ ದೊಡ್ಡ ಮನುಷ್ಯರ ಸಾಲಿನಲ್ಲಿ ತನ್ನಂತೆ ಅವನೂ ಸೇರಿದನು. ಅವನ ಹತ್ತಿರ ಯಾರಾದರೂ ಏನಾದರೂ ಆಲೋಚನೆ ಕೇಳಲಿಕ್ಕೆ ಬಂದರೆ ಗಡ್ಡ ನೀವಿಕೊಳ್ಳುತ್ತ, "ನನಗೆ ಇದೇ ಕೆಲಸವೆಂದುಕೊಂಡೆಯಾ ? ನಾಳೆ ಬಾ, ನೋಡೋಣ. ಬರಿಗೈಯಲ್ಲಿ ಬಂದರೆ ಪ್ರಯೋಜನವಿಲ್ಲ ಗೊತ್ತಾ ? " ಎಂದು ದರ್ಪದಿಂದ ಮಾತಾಡಲು ಕಲಿತಿದ್ದನು.

ಹೀಗೆ ಆರು ತಿಂಗಳು ಕಳೆದುಹೋಯಿತು. ಆಮೇಲೆ ಒಂದು ದಿನ ಪಕ್ಕದ ಊರಿನಲ್ಲಿ ಒಂದು ಔತಣದ ಕರೆ ಬಂದುದರಿಂದ ಬೆಸ್ತನು ಅಲ್ಲಿಗೆ ಹೋದನು. ಅಲ್ಲಿ ಕುತ್ತಿಗೆಯ ವರೆಗೆ ತಿಂದು, ಮಿತಿ ಮೀರಿ ಸಾರಾಯಿ ಕುಡಿದನು. ಔತಣದ ಗೌಜಿ ಮುಗಿಯುವಾಗ ರಾತ್ರಿ ಬಹಳ ಹೊತ್ತಾಗಿ ಹೋಯಿತು. ಬೆಸ್ತನು ಆಲುತ್ತಮಾಲುತ್ತ ಸಂದರ್ಭ ಬಿದ್ದರೆ ಯಾರ ಮೇಲಾದರೂ ಬೀಳಲು ಸಿದ್ಧನಾಗಿ ಮನೆಗೆ ಬಂದನು. ಬಾಗಿಲು ಹಾಕಿಕೊಂಡು ಎಲ್ಲರೂ ಗಾಢ ನಿದ್ರೆಯಲ್ಲಿ ಮುಳುಗಿದ್ದರು.

"ಏ! ಬಾಗಿಲು! ಬಾಗಿಲು! ಜಮೀನ್ದಾರ ಬಂದ! ಬಾಗಿಲು ತೆರೀರೊ!" ಎಂದು ಅವನು ಕೂಗಲು ತೊಡಗಿದನು. ಆದರೆ ಯಾರಿಗೂ ಎಚ್ಚ ರಾಗಲಿಲ್ಲ. ಅವನಿಗೆ ಕೋಪವು ಒದ್ದೆದ್ದುಕೊಂಡು ಬಂತು. "ಅಂ! ಏನೆಂದುಕೊಂಡ್ರೋ! ನಾನೆಂದರೆ ಅಷ್ಟು ಸಸಾರಾನೇ! ಸರೋವರದಿಂದ ನಾನು ಮೇಲೆತ್ತಿದ ಆ ಮುದಿಗೂಬೆ ಏನು ಮಾಡುತ್ತಾ ಇದೆ? ಎದ್ದು ಬಾಗಿಲು ತೆರೆಯೋ ಮುದಿ ಹೆಣವೇ!" ಎಂದು ಕಿರಿಚಿದನು.

ಅವನ ಕಡೇ ಮಾತು ಅವನ ಬಾಯೊಳಗಿರುವಾಗಲೇ ಮುದುಕಿ ಬಾಗಿಲು ತೆರೆದು ನಿಂತಿದ್ದಳು. ಅವಳು ಅವನನ್ನು ಚುರುಚುರು ನೋಡುತ್ತ "ನೀನು ನನ್ನನ್ನು ಸುಮ್ಮನೆ ಹೀನವಾಗಿ ಬಯ್ಯುವಿ. ಮಾಡಿದ ಉಪಕಾರ ಮರೆಯುವವರ ಹತ್ತಿರವೂ, ಯಾರ ಹತ್ತಿರ ಹೇಗೆ ನಡೆದುಕೊಳ್ಳುವುದೆಂದು ತಿಳಿಯದವರ ಹತ್ತಿರವೂ ನಾನು ಇರುವವಳಲ್ಲ. ನಾಳೆಯೇ ನನ್ನ ಸ್ಥಳಕ್ಕೆ ನಾನು ಹೊರಟು ಹೋಗುತ್ತೇನೆ" ಎಂದಳು.

"ಓಹೋಹೋ! ಹೋದರೆ ಹೋಗು! ಪೀಡೆ ಬಿಟ್ಟಿತು ಅಂದುಕೊಳ್ಳುತ್ತೇನೆ" ಎಂದನು ಬೆಸ್ತರವನು.

ಮರುದಿನ ಬೆಳಿಗ್ಗೆ ಮುದುಕಿ ಎದ್ದಳು. ತನ್ನ ಹಾಸಿಗೆ ಬಟ್ಟೆಗಳನ್ನು ಚೆಂದಾಗಿ ಮಡಚಿಟ್ಟಳು. ಮುಸುರೆ ಪಾತ್ರೆಗಳನ್ನು ಶುಭ್ರವಾಗಿ ತೊಳೆದಿಟ್ಟಳು. ಮನೆ ಕಸ ಪೂರಾ ಬಳಿದಳು. ಮನೆಯಿಂದ ಒಂದು ಕಸದ ಕಡ್ಡಿ ಕೂಡಾ ತೆಗೆದುಕೊಳ್ಳದೆ, ಪಶುಗಳ ಕೊಟ್ಟಿಗೆಯ ಬಾಗಿಲು ತೆರೆದಳು.

ಆಮೇಲೆ ಅವಳು ಸರೋವರದ ಕಡೆಗೆ ನಡೆದಳು. ಪಶುಗಳೆಲ್ಲಾ ಜೋಡಿ ಜೋಡಿಯಾಗಿ ಅವಳ ಹಿಂದೆಯೇ ಹೋಗಿ ಅವಳೊಂದಿಗೇ ಸರೋವರದೊಳಗೆ ಪ್ರವೇಶಿಸಿ ಕಾಣದೆ ಹೋದುವು. ಬೆಸ್ತರವನು ಮೀನು ಹಿಡಿದು ಜೀವಿಸುವ ಸ್ಥಿತಿಗೇ ಬಂದನು. ಅವನ ಅದೃಷ್ಟ ದೇವತೆ ಹೊರಟುಹೋಗಿ ಸರೋವರದೊಳಗೆ ಮುಳುಗಿದ್ದಳು. "ಅಟ್ಟಮೇಲೆ ಒಲೆ ಉರಿದರೂ ಕೆಟ್ಟಮೇಲೆ ಬುದ್ಧಿ ಬಂದರೂ" ಒಂದೇ ತಾನೇ?



# ಪ್ರತಿಭೆ

ಉತ್ತರ ದೇಶಗಳ ಯಾತ್ರೆಗಾಗಿ ಹೊರಟ ಜ್ಞಾನಾನಂದನೂ, ದಕ್ಷಿಣ ದೇಶಗಳ ಯಾತ್ರೆಗೆ ಹೊರಟಿದ್ದ ವಿಜಯಾನಂದನೂ ಒಂದು ಕಡೆಯಲ್ಲಿ ಸಂಧಿಸಿಕೊಂಡರು.

ಇಬ್ಬರೂ ಸಾಧುಗಳೇ. ಪ್ರಯಾಣದಲ್ಲಿ ತಮ್ಮ ತಮ್ಮ ಅನುಭವಗಳನ್ನು ಕುರಿತು ಅವರಿಬ್ಬರೂ ಸ್ವಲ್ಪ ಹೊತ್ತು ಹೇಳಿಕೊಂಡರು.

ಹಾಗೆ ಮಾತಿನ ಸಂದರ್ಭದಲ್ಲಿ ಜ್ಞಾನಾನಂದನು, "ಪ್ರತಿಯೊಬ್ಬರಲ್ಲಿಯೂ ಏನೋ ಒಂದು ಪ್ರತಿಭೆಯಿರುತ್ತದೆ" ಎಂದನು.

"ಪ್ರತಿಯೊಬ್ಬನಲ್ಲಿ ಏನೋ ಒಂದು ಪ್ರತಿಭೆಯಿರಲು ಸಾಧ್ಯವೇ ಇಲ್ಲ" ಎಂದನು ವಿಜಯಾನಂದ.

ಸ್ವಲ್ಪ ಹೊತ್ತು ಇಬ್ಬರ ನಡುವೆ ವಾದೋಪವಾದಗಳಾದುವು.

ಕಡೆಗೆ ವಿಜಯಾನಂದನು "ನಿಮ್ಮಲ್ಲಿ ಏನು ಪ್ರತಿಭೆ ಇದೆ? ಮೊದಲು ಅದನ್ನು ಹೇಳಿರಿ" ಎಂದನು.

"ಇದಿರಿನಲ್ಲಿರುವವರ ಪ್ರತಿಭೆ ತಿಳಿಯುವ ಪ್ರತಿಭೆ ನನಗಿದೆ" ಎಂದನು ಜ್ಞಾನಾನಂದ.

"ಹೌದೇನು? ಹಾಗಾದರೆ ನನ್ನಲ್ಲಿ ಯಾವ ಪ್ರತಿಭೆ ಇದೆ, ಹೇಳಿರಿ" ಎಂದು ಸವಾಲಿಸುವಂತೆ ಹೇಳಿದನು ವಿಜಯಾನಂದ.

"ನಿಮಗೆ ಇದಿರಿನಲ್ಲಿರುವವರ ಪ್ರತಿಭೆಯನ್ನು ತಿಳಿಯಲಾಗದಂತಹ ಪ್ರತಿಭೆ ಇದೆ" ಎಂದನು ಜ್ಞಾನಾನಂದ.

ಅದನ್ನು ಕೇಳಿ ವಿಜಯಾನಂದನು ಲಜ್ಜೆಯಿಂದ ತಲೆ ತಗ್ಗಿಸಿದನು.





# ಶಿವಲೀಲೆ

ಪುರಾಣ ಕಾಲದ ಮೃಕಂಡು ಮಹರ್ಷಿ ಭೃಗು ಸಂತತಿಯವನು. ಅವನ ಹೆಂಡತಿಯ ಹೆಸರು ಮರುದ್ವತಿ. ಅವರಿಗೆ ಎಷ್ಟು ಕಾಲವಾದರೂ ಸಂತಾನವಾಗಿರಲಿಲ್ಲ. ಅದಕ್ಕಾಗಿ ಪ್ರತ್ಯೇಕ ನೇಮನಿಷ್ಠೆಗಳನ್ನು ಮಾಡಿದರು. ಬೇರೆ ಬೇರೆ ಪುಣ್ಯಕ್ಷೇತ್ರಗಳಿಗೆ ಹೋಗಿ ತಪಸ್ಸು ಮಾಡಿದರು. ಹಾಗೆಯೇ ಕೇದಾರ ಕ್ಷೇತ್ರಕ್ಕೆ ಹೋದರು. ಅಲ್ಲಿ ಕೇದಾರೇಶ್ವರನನ್ನು ಸೇವಿಸುತ್ತ ಧ್ಯಾನ ಮಾಡಿಕೊಂಡಿದ್ದರು.

ಒಂದು ದಿನ ಆ ಮುನಿದಂಪತಿಗಳು ಕೇದಾರೇಶ್ವರನನ್ನು ಪೂಜಿಸಿ ಧ್ಯಾನಮಗ್ನರಾಗಿರುವಾಗ, "ಇನ್ನು ನಿಮ್ಮ ಸೇವೆ ಸಾಕು. ನಿಮ್ಮ ಆಶ್ರಮಕ್ಕೆ ಹೋಗಿರಿ. ನಿಮಗೆ ಪುತ್ರಭಾಗ್ಯ ಉಂಟಾಗುತ್ತದೆ" ಎಂದು ಅವರಿಗೆ ಒಂದು ಅಶರೀರವಾಣಿ ಕೇಳಿಸಿತು.

ಧ್ಯಾನವನ್ನು ಭೇದಿಸಿ ಕಿವಿಗೆ ಬಿದ್ದ ಆ ದಿವ್ಯವಾಣಿಯನ್ನು ಕೇಳಿ ಮೃಕಂಡು ದಂಪತಿಗಳು ಬಹಳ ಸಂತೋಷದಿಂದ ತಮ್ಮ ಮನೆಗೆ ಹಿಂದಿರುಗಿದರು. ಮನೆಯಲ್ಲಿ ಯಥಾವಿಧಿಯಾಗಿ ಗೃಹಸ್ಥಾಶ್ರಮ ಧರ್ಮವನ್ನು ನಿರ್ವಹಿಸಿಕೊಂಡಿರುವಾಗ ಮರುದ್ವತಿ ಗರ್ಭಿಣಿಯಾಗಿ ಕಾಲಕ್ರಮದಲ್ಲಿ ಗಂಡು ಮಗುವನ್ನು ಪ್ರಸವಿಸಿದಳು.

ಅದೇ ಸಮಯದಲ್ಲಿ ಆಕಾಶದಿಂದ, "ಈ ಬಾಲನಿಗೆ ಅಲ್ಪಾಯುಷ್ಯ. ಹನ್ನೆರಡು ವರ್ಷವಷ್ಟೇ ಆಯುಷ್ಯ!" ಎಂಬೊಂದು ಅಶರೀರವಾಣಿ ಮೊಳಗಿತು. ಅದನ್ನು ಕೇಳಿ ಅವರು ಆನಂದದ ಶಿಖರಾಗ್ರದಿಂದ ಒಮ್ಮೆಗೇ ದುಃಖ ಸಾಗರಕ್ಕೆ ಬಿದ್ದರು. ದುಃಖದಾಳಕ್ಕೆ ಮುಳುಗುವುದೇ ಅವರ ಹಣೆಬರೆಹವಾಯಿತು. ಕಡೆಗೆ "ಎಲ್ಲವೂ ಆ ಶಿವನ ಲೀಲೆ. ಕೊಟ್ಟವನೂ ಅವನೇ, ಹೀಗೆ ಹೇಳುವವನೂ ಅವನೇ! ನಾವೇನು ಮಾಡಬಲ್ಲೆವು?" ಎಂದು ತಮಗೆ ತಾವೇ ಸಮಾಧಾನ ತಂದುಕೊಂಡು, ಕಂದನ ಬೊಚ್ಚುಬಾಯ ನಗುವಿನಲ್ಲೇ ಮೈಮರೆತರು.

ಯಥಾ ಕಾಲದಲ್ಲಿ ಮೃಕಂಡು ಮಗನಿಗೆ ಜಾತಕರ್ಮ ನಡೆಯಿಸಿ, ಮಾರ್ಕಂಡೇಯನೆಂದು ನಾಮಕರಣ ಮಾಡಿದನು. ಮಾರ್ಕಂಡೇಯನು ದಿನದಿನ

## ೧. ಮಾರ್ಕಂಡೇಯನ ಕಥೆ



ಪ್ರವರ್ಧಮಾನನಾಗಿ ಬೆಳೆಯುತ್ತ, ಉಪನಯನವಾದ ಮೇಲೆ ಗುರುಕುಲಕ್ಕೆ ಹೋಗಿ, ವಿದ್ಯಾಬುದ್ಧಿಗಳನ್ನು ಕಲಿಯುತ್ತ ಹನ್ನೊಂದು ವರ್ಷದ ಹುಡುಗನಾಗಿ ತಂದೆ ತಾಯಿಗಳ ಬಳಿಗೆ ಬಂದನು. ಬ್ರಹ್ಮ ತೇಜಸ್ಸಿನಿಂದ ಮುದ್ದುಗುಲುಕುವ ಕುಮಾರನನ್ನು ನೋಡಿದ ಕೂಡಲೇ ಹೆತ್ತವರ ಎದೆ ಗುಂಡಿಗೆಯೊಳಗೆ ಗಡಗಡ ಪ್ರಾರಂಭವಾಯಿತು. ಇನ್ನು ಒಂದು ವರ್ಷವಷ್ಟೇ ಈ ಹುಡುಗನ ಗಡು !

ಮರುದ್ವತಿ ಕುಮಾರನನ್ನು ಬಿಡದೆ ಅಪ್ಪಿಕೊಂಡು ಕಣ್ಣೀರು ಸುರಿಸುತ್ತಿದ್ದಳೇ ಹೊರತು, ವಿದ್ಯೆ ಕಲಿತು ಬಂದ ಸುಕುಮಾರನನ್ನು ನೋಡಿ ಸಂತೋಷಪಡಲಿಲ್ಲ. ಅದನ್ನು ನೋಡಿ ಮಾರ್ಕಂಡೇಯನು ಎಷ್ಟೆಷ್ಟು ಕೇಳಿದರೂ ಬಿಕ್ಕಿಬಿಕ್ಕಿ ಅಳುವಳೇ ಹೊರತು ಉತ್ತರ ಕೊಡುತ್ತಿದ್ದಿಲ್ಲ. ಕಡೆಗೆ ಮೃಕಂಡುವೇ ಹೇಳಲಾಗದೆ ತಡಕಾಡಿಕೊಂಡು ಮಗನೊಂದಿಗೆ ಇನ್ನು ಒಂದು ವರ್ಷದಲ್ಲಿ ಅವನಿಗೆ ಮೃತ್ಯು ಬರುತ್ತದೆಂಬ ಸತ್ಯವನ್ನು ಹೊರಪಡಿಸಿ, ಎಲ್ಲ ಸಂಗತಿಯನ್ನೂ ಒಂದೊಂದಾಗಿ ಹೇಳಿ ಮುಗಿಸಿದನು.

ಅದನ್ನು ಕೇಳಿ ಮಾರ್ಕಂಡೇಯನು ಚಿಂತಿಸಿ ಕಂಗೆಡಲಿಲ್ಲ. ಧೀರಚಿತ್ತದಿಂದ ಕರ್ತವ್ಯವನ್ನು ಆಲೋಚಿಸಿ, "ನೀವೇನೂ ಚಿಂತಿಸಬೇಡಿರಿ. ನನ್ನನ್ನು ಆಶೀರ್ವಾದ ಮಾಡಿರಿ. ಈಗಲೇ ನಾನು ತಪಸ್ಸಿಗೆ ಹೋಗುತ್ತೇನೆ. ಶಿವಾನುಗ್ರಹದಿಂದ ಮೃತ್ಯುವನ್ನು ಜಯಿಸಿ ಚಿರಂಜೀವಿಯಾಗಿಯೇ ಬರುತ್ತೇನೆ" ಎಂದು ತಂದೆ ತಾಯಿಗಳಿಗೆ ಪ್ರಣಾಮ ಮಾಡಿದನು.

ಮೃಕಂಡುವೂ, ಮರುದ್ವತಿಯೂ ಕುಮಾರನನ್ನು ಆಲಿಂಗಿಸಿ, "ಚಿರಂಜೀವಿಯಾಗು" ಎಂದು ಆಶೀರ್ವದಿಸಿದರು. ಅದೇ ಸಮಯಕ್ಕೆ ಅಲ್ಲಿಗೆ ನಾರದನು ಬಂದನು. ಮೃಕಂಡು ನಾರದನನ್ನು ಪೂಜಿಸಿ, ತಮ್ಮ ಕುಮಾರನ ಸಂಗತಿಯನ್ನೆಲ್ಲಾ ನಿವೇದಿಸಿಕೊಂಡನು.

ನಾರದನು ಮಾರ್ಕಂಡೇಯನ ದೃಢ ಸಂಕಲ್ಪವನ್ನು ಮೆಚ್ಚಿಕೊಂಡು "ಕಂದಾ, ಮಾರ್ಕಂಡೇಯಾ ! ನೀನು ನೆಟ್ಟಗೆ ಗೌತಮೀ ತೀರಕ್ಕೆ ಹೋಗು. ಅಲ್ಲಿ ಪಂಚಾಕ್ಷರೀ ಮಂತ್ರದಿಂದ, ತದೇಕ ದೀಕ್ಷೆಯಲ್ಲಿ ಶಿವಾರ್ಚನೆ ಮಾಡು. ನಿನ್ನ ಉದ್ದೇಶ ಸಿದ್ಧಿಸುತ್ತದೆ" ಎಂದು ಹೇಳಿ, ಆಶೀರ್ವಾದ ಮಾಡಿ ಹೊರಟು ಹೋದನು.

ಮಾರ್ಕಂಡೇಯನು ಗೌತಮೀ ನದಿಯ ತೀರಕ್ಕೆ ಹೋಗಿ, ಸೈಕತ ಲಿಂಗವನ್ನು ಪ್ರತಿಷ್ಠೆಮಾಡಿ, "ಹೇ ! ಚಂದ್ರಶೇಖರಾ ! ನೀನೇ ನನ್ನನ್ನು ರಕ್ಷಿಸಬೇಕು. ನಿನ್ನ ಪಾದಗಳನ್ನು ಆಶ್ರಯಿಸಿರುವ ನನ್ನನ್ನು ಯಮನು ಏನು ತಾನೇ ಮಾಡಬಲ್ಲನು ? ನಿನಗೇ ಶರಣಾಗಿದ್ದೇನೆ" ಎಂದು ಶಿವಧ್ಯಾನದಲ್ಲಿ ತಪಸ್ಸು ಸಾಗಿಸತೊಡಗಿದನು.

ಆಗ ತ್ರಿಲೋಕ ಸಂಚಾರಿಯಾದ ನಾರದನು ಯಮನ ಹತ್ತಿರ ಹೋಗಿ, "ನೋಡಿದೆಯಾ ಯಮ



ಧರ್ಮಾ! ಮೃತ್ಯುವನ್ನು ತಪ್ಪಿಸಿಕೊಳ್ಳಬೇಕೆಂದು ಮಾರ್ಕಂಡೇಯನೆಂಬ ಮುನಿಬಾಲಕನು ತಪಸ್ಸು ಮಾಡುತ್ತಾ ಇದ್ದಾನೆ. ಇನ್ನು ನಿನ್ನ ಬಲವೆಷ್ಟೆಂಬುದು ಲೋಕಕ್ಕೆ ತಿಳಿಯುವ ಕಾಲವು ಸಮೀಪಿಸಿತು" ಎಂದು ಅದೊಂದು ವಿಶೇಷ ಸುದ್ದಿಯೆಂಬಂತೆ ಹೇಳಿ ಹೊರಟುಹೋದನು.

ಮಾರ್ಕಂಡೇಯನ ಆಯುಷ್ಯವು ಪೂರ್ತಿಯಾಗುವ ದಿನ ಹತ್ತಿರವಾಯಿತು. ಯಮನು ಮಾರ್ಕಂಡೇಯನ ಪ್ರಾಣವನ್ನು ತೆಗೆದುಕೊಂಡು ಬರಲು ತನ್ನ ದೂತರನ್ನು ಕಳುಹಿಸಿದನು. ಯಮಕಿಂಕರರು ಮಾರ್ಕಂಡೇಯನ ಹತ್ತಿರ ಬರಲು ಸಾಧ್ಯವಾಗದೆ ಹಿಂಜರಿದು ಓಡಿಹೋಗಿ ಯಮನ ಮುಂದೆ ತಲೆಬಾಗಿ ನಿಂತರು. ಅದನ್ನು ನೋಡಿ ಯಮನೇ, ದಂಡ ಪಾಶಗಳನ್ನು ಧರಿಸಿಕೊಂಡು ಕರಿಕೋಣದ ಮೇಲೆ ಕುಳಿತುಕೊಂಡು ಮಾರ್ಕಂಡೇಯನ ಬಳಿಗೆ ಹೊರಟನು. ಅವನು ಬಂದಾಗ ಮಾರ್ಕಂಡೇಯನು ಶಿವಲಿಂಗಕ್ಕೆ ತಲೆಯನ್ನು ತಾಗಿಸಿ ಎರಡು ಕೈಗಳಿಂದಲೂ ಶಿವಲಿಂಗವನ್ನು ಗಟ್ಟಿಯಾಗಿ ಬಿಗಿದಪ್ಪಿಕೊಂಡು ಧ್ಯಾನಮಗ್ನನಾಗಿದ್ದನು. ಆ ಸಮಯದಲ್ಲಿ ಯಮನು ತನ್ನ ಕಾಲ ಪಾಶವನ್ನು ಮಾರ್ಕಂಡೇಯನ ಕಂಠ ಪ್ರದೇಶಕ್ಕೆ ಬೀಸಿ ಹಾಕಿದನು. ಆ ಪಾಶವು ಶಿವಲಿಂಗದ ಮೇಲಿಂದಾಗಿ ಮಾರ್ಕಂಡೇಯನ ಕಂಠವನ್ನೂ ಸುತ್ತಿಕೊಂಡಿತು.

ಮರುಕ್ಷಣದಲ್ಲಿ ಶಿವಲಿಂಗದಿಂದ ಶಿವನು ಪ್ರತ್ಯಕ್ಷನಾಗಿ ಪ್ರಳಯರುದ್ರ ರೂಪದಲ್ಲಿ ಬಿಡಿಸಿದ ಮೂರನೆಯ ಕಣ್ಣಿನೊಂದಿಗೆ ಆವಿರ್ಭವಿಸಿ, ಯಮನ ಮೇಲೆ ತ್ರಿಶೂಲವನ್ನು ಗುರಿಹಿಡಿದೆತ್ತಿದನು. ಯಮನು ಭಯದಿಂದ ಗದಗದ ನಡುಗುತ್ತ, ಕೈಗಳನ್ನೆತ್ತಿ ಜೋಡಿಸುತ್ತಾ, "ಹರಹರಾ! ರಕ್ಷಿಸು! ರಕ್ಷಿಸು!" ಎಂದು ಕುಸಿಬಿದ್ದನು.

ಶಿವನು ಮಾರ್ಕಂಡೇಯನ ತಲೆಯ ಮೇಲೆ ಅಭಯ ಹಸ್ತವನ್ನಿಟ್ಟು, "ವತ್ಸಾ! ನಿನಗೆ ಮೃತ್ಯುವೇ ಇಲ್ಲ. ಕಲ್ಪ ಕಲ್ಪಾಂತಗಳನ್ನು ನೋಡುತ್ತ ಚಿರಂಜೀವಿಯಾಗಿರುವಿ!" ಎಂದು ವರಕೊಟ್ಟನು.

ಆಗ ಶಿವನ ಕೋಪವನ್ನು ನೋಡಿ ಹೆದರಿದ ದೇವತೆಗಳೆಲ್ಲಾ ಅಲ್ಲಿಗೆ ಬಂದು, ಶಿವನಿಗೆ ಕೈ ಮುಗಿದು, ಯಮನಿಲ್ಲದಿದ್ದರೆ ಲೋಕಗಳು ಉಳಿಯಲಾರವೆಂದು ಪ್ರಾರ್ಥಿಸುತ್ತ, ಯಮನನ್ನು ಮನ್ನಿಸಬೇಕೆಂದು ಶಿವನನ್ನು ಬೇಡಿಕೊಂಡರು. ಅವನ ಅನುಗ್ರಹದಿಂದ ಯಮನು ಮತ್ತೆ ಪುನರ್ಜನ್ಮ ಪಡೆದವನಂತೆ ಎದ್ದು ತನ್ನ ಲೋಕಕ್ಕೆ ಹೊರಟು ಹೋದನು.

ಆ ದಿನ ತಮ್ಮ ಕುಮಾರನನ್ನು ಹುಡುಕುತ್ತಾ ಬಂದ ಮರುದ್ವತೀ ಮೃಕಂಡುಗಳು ಶಿವಾನುಗ್ರಹ ಪಡೆದು ನೂತನ ಕಳೆಯಿಂದ ಬೆಳಗುವ ಕುಮಾರನನ್ನು ನೋಡಿ, ಶಿವಲೀಲೆಯನ್ನು ಕೊಂಡಾಡುತ್ತ ಚಿರಂಜೀವಿಯಾದ ಮಗನೊಂದಿಗೆ ತಮ್ಮ ನಿವಾಸಕ್ಕೆ ತೆರಳಿದರು. ಅಂದಿನಿಂದ ಹಿರಿಯರ ಆಶೀರ್ವಾದದ



ವಚನವಲ್ಲಿ "ಚಿರಂಜೀವಿ" ನೆಲೆಯಾಗಿ ನಿಂತನು. ಮಾರ್ಕಂಡೇಯನು ಬಹುಕಾಲ ಜೀವಿಸಿಕೊಂಡಿರುವಾಗ, ಹೆಚ್ಚುಕಾಲ ಜೀವಿಸಿದವರು ಯಾರೆಂದು ಅವನಿಂದ ತಿಳಿದುಕೊಂಡವರೂ ಇದ್ದರು.

ಇಂದ್ರದ್ಯುಮ್ನನೆಂಬ ರಾಜನು ಬದುಕಿರುವಾಗ ಬಹುದೊಡ್ಡ ಯಶಸ್ಸನ್ನು ಸಂಪಾದಿಸಿ ಆ ಯಶಸ್ಸು ಉಳಿದಷ್ಟು ಕಾಲದವರೆಗೆ ಸ್ವರ್ಗಸುಖಗಳನ್ನು ಅನುಭವಿಸಿದನು. ಆಮೇಲೆ ಸ್ವರ್ಗದಲ್ಲಿದ್ದವರು "ಭೂಲೋಕದಲ್ಲಿ ನಿನ್ನ ಹೆಸರು ಹೇಳಿಕೊಳ್ಳುವವರು ಯಾರೂ ಇಲ್ಲ. ಆದುದರಿಂದ ಇನ್ನುಮೇಲೆ ನಿನಗೆ ಸ್ವರ್ಗದಲ್ಲಿ ಸ್ಥಾನವಿಲ್ಲ. ಭೂಮಿಗೇ ಹಿಂದಿರುಗಿಬಿಡು" ಎಂದರು.

ಇಂದ್ರದ್ಯುಮ್ನನು ಭೂಲೋಕಕ್ಕೆ ಹಿಂದಿರುಗಿ ಬಂದು, ತನ್ನ ಹೆಸರು ನೆನಪಿರುವವರನ್ನು ಹುಡುಕುತ್ತ ಮಾರ್ಕಂಡೇಯನ ಬಳಿಗೆ ಬಂದನು.

"ನಾನು ನಿನ್ನನ್ನು ಅರಿಯೆನು. ನನಗಿಂತ ಹಿರಿಯನಾಗಿ ಪ್ರಾವಾರಕರ್ಣನೆಂಬ ಘೂಕ (ಗೂಗೆ) ನಿದ್ದಾನೆ. ಅವನನ್ನು ಕೇಳು" ಎಂದನು ಮಾರ್ಕಂಡೇಯ. ಇಬ್ಬರೂ ಕೂಡಿ ಪ್ರಾವಾರಕರ್ಣನ ಬಳಿಗೆ ಹೋದರು.

"ನಾನು ನಿನ್ನನ್ನು ಅರಿಯೆನು. ಆದರೆ ನನಗಿಂತ ಹಿರಿಯನಾಗಿ ನಾಳೀಕಜಂಘನೆಂಬ ಬಕ (ಕೊಕ್ಕರೆ) ನೊಬ್ಬನಿದ್ದಾನೆ. ಅವನನ್ನು ಕೇಳೋಣ ಬನ್ನಿ" ಎಂದು ಪ್ರಾವಾರಕರ್ಣನೂ ಅವರೊಂದಿಗೆ ಹೊರಟನು.

ನಾಳೀಕಜಂಘನಿಗೂ ಇಂದ್ರದ್ಯುಮ್ನನ ಪರಿಚಯವಿರಲಿಲ್ಲ. ಅವನು ಅವರನ್ನು ಕರೆದುಕೊಂಡು ಅವನಿಗಿಂತ ಹೆಚ್ಚು ವಯಸ್ಸಾದ ಅಕೂಪಾರನೆಂಬ ಆಮೆಯ ಬಳಿಗೆ ಹೋದನು.

ಅಕೂಪಾರನು ಇಂದ್ರದ್ಯುಮ್ನನನ್ನು ನೋಡಿದ ಕೂಡಲೇ, "ಓ ಓ! ಇಂದ್ರದ್ಯುಮ್ನರು! ನಿಮ್ಮ ನೆನಪಿನಲ್ಲೇ ನಾನಿದ್ದೇನೆ. ನಾನಿರುವ ಈ ಕೊಳವು ನಿಮ್ಮಿಂದಲೇ ಉಂಟಾಯಿತು. ನೀವು ಅನೇಕ ಯಜ್ಞಗಳನ್ನು ಮಾಡಿ ಗೋವುಗಳನ್ನು ದಾನಕೊಡುವಾಗ ಗೋವುಗಳ ತುಳಿತದಿಂದ ಏರ್ಪಟ್ಟ ಕೊಳವಿದು" ಎಂದನು.

ಆಗ ದೇವದೂತರು ಇಂದ್ರದ್ಯುಮ್ನನ ಕೀರ್ತಿ ಇನ್ನೂ ಭೂಮಿಯಲ್ಲಿ ಉಳಿದಿರುವುದೆಂದು ತಿಳಿದು ಅವನನ್ನು ಮತ್ತೆ ಸ್ವರ್ಗಲೋಕಕ್ಕೆ ಕರೆದುಕೊಂಡು ಹೋದರು.

**ಭೀ**ಮಾವತಿ ಎಂಬ ಊರಿನಲ್ಲಿ ಸಿವಭಕ್ತನಾದ ಸೋಮಯಾಜಿಯೊಬ್ಬನು ವಾಸವಾಗಿದ್ದನು. ಅವನಿಗೆ ಸಿದ್ಧರಾಮನೆಂಬ ಒಬ್ಬ ಮಗನು ಹುಟ್ಟಿದನು. ಆ ಹುಡುಗನಿಗೆ ಏಳು ವರ್ಷವಾದಾಗ ಸೋಮಯಾಜಿ ಮೃತಪಟ್ಟನು. ತಂದೆಯನ್ನು ಕಳೆದುಕೊಂಡ ಮಗನನ್ನು ತಾಯಿಯೇ ಅತ್ಯಂತ ಅಕ್ಕರೆಯಿಂದ ಬೆಳೆಸುತ್ತಾ ಬರುತ್ತಿದ್ದಳು.

ದೀಪಾವಳಿಯ ದಿನಗಳು ಸಮೀಪಿಸಿಕೊಂಡಿರುವಾಗ ಒಂದು ದಿನ ಸಿದ್ಧರಾಮನು ತನ್ನ ಈಡು

ಜೋಡಿನ ಗೆಳೆಯರೊಂದಿಗೆ, ಸಮಿಧೆಗಳನ್ನೂ, ಎಲೆಗಳನ್ನೂ ತರಲು ಅಡವಿಗೆ ಹೋದನು. ಅಲ್ಲಿ ಹುಡುಗರೆಲ್ಲಾ ಒಂದು ಆಲದ ಮರದ ಕೆಳಗೆ ಕುಳಿತುಕೊಂಡು ಕಾಡು ಹರಟೆ ಮಾತಾಡಿಕೊಂಡಿದ್ದರು.

"ಈ ದೀಪಾವಳಿಗೆ ನಮ್ಮ ಅಕ್ಕನನ್ನೂ ಬಾವನನ್ನೂ ಕರೆದಿದ್ದೇವೆ. ಹಬ್ಬಕ್ಕೆ ನಮ್ಮಲ್ಲಿ ಅಪ್ಪ ಮಾಡುತ್ತಾರೆ. ಅಕ್ಕನಿಗೂ ಬಾವನಿಗೂ ಹೊಸ ವಸ್ತ್ರ ಕೊಡುತ್ತಾರೆ. ನಮಗೂ ಸಿಗುತ್ತೆ" ಎಂದು ಹುಡುಗರು ಒಬ್ಬೊಬ್ಬರೊಡನೊಬ್ಬರು ಉತ್ಸಾಹದಿಂದ ಮಾತಾಡುತ್ತಿದ್ದರು.

ಆ ಮಾತು ಕೇಳಿ ಸಿದ್ಧರಾಮನು "ನಾವು ಕೂಡಾ ಹಬ್ಬಕ್ಕೆ ಅಕ್ಕನನ್ನೂ ಬಾವನನ್ನೂ ಕರೆಯುತ್ತೇವೆ. ನಮ್ಮ ಮನೆಯಲ್ಲಿಯೂ ಪಾಯಸ ಮಾಡುತ್ತಾಳೆ ನನ್ನಮ್ಮ. ಅಕ್ಕನಿಗೂ ಬಾವನಿಗೂ ಹೊಸ ಬಟ್ಟೆ ಕೊಡುತ್ತೇವೆ" ಎಂದು ಹೆಚ್ಚಳಿಸಿಕೊಂಡು ಹೇಳಿದನು.

ಆ ಮಾತು ಕೇಳಿ ಹುಡುಗರೆಲ್ಲ ಗೇಲಿಯಾಗಿ ನಕ್ಕು, "ನಿನಗೆ ಮೊದಲು ಅಕ್ಕನೇ ಇಲ್ಲ. ಬಾವ ಎಲ್ಲಿಂದ ಬರುತ್ತಾರೆ? ನಮ್ಮ ಹತ್ತಿರ ಸುಳ್ಳು ಸುಳ್ಳೇ ಜಂಬ ಹೊಡೆಯುವಿಯಾ? ಹೇಳು ನೋಡುವಾ, ಯಾರು ನಿನ್ನ ಅಕ್ಕಾ? ಹೆಸರೇನು? ಎಲ್ಲಿದೆ ಅವರ ಮನೆ? ಅವರು ಏನು ಕೆಲಸ ಮಾಡುತ್ತಾರೆ? ಎಷ್ಟು ಓದಿದ್ದಾರೆ? ಅವರಿಗೆ ಎಷ್ಟು ಮಕ್ಕಳು? ಆ ಮಕ್ಕಳ ಹೆಸರುಗಳೇನು? ಗೊತ್ತಿದೆಯೇ ನಿನಗೆ?" ಎಂದು ನಗುತ್ತಾ ಸಿದ್ಧರಾಮನ ಮೇಲೆ ಪ್ರಶ್ನೆಗಳ ಮಳೆಯನ್ನೇ ಸುರಿಸಿದರು.

ಆ ಪ್ರಶ್ನೆಗಳಿಗೆಲ್ಲ ಸಮಾಧಾನ ಹೇಳಲು ಗೊತ್ತಾಗದೆ ಸಿದ್ಧರಾಮನು ಅವಮಾನಿತನಾಗಿ ಅಳುತ್ತಾ ಮನೆಗೆ ಬಂದನು.

ಮಗನು ಅಳುತ್ತಾ ಬರುವುದನ್ನು ನೋಡಿ, ತಾಯಿ ಗಾಬರಿಯಾಗಿ ಅವನನ್ನು ಬಾಚಿ ತಬ್ಬಿಕೊಂಡು, "ಏನಾಯಿತಪ್ಪಾ? ಬಿದ್ದೆಯಾ? ಪೆಟ್ಟಾಯಿತೆ? ಯಾರಾದರೂ ಹೊಡೆದರೆ? ಯಾಕೆ ಅಳುತ್ತೀಯಪ್ಪಾ?" ಎಂದು ಕೇಳಿದಳು.

ಸಿದ್ಧರಾಮನು ತಾಯಿಯೊಂದಿಗೆ ಜತೆ ಹುಡುಗರು ಮಾಡಿದ ಎಗತಾಳಿಯನ್ನು ಕುರಿತು ಹೇಳಿದನು.

ಅದನ್ನು ಕೇಳಿ ತಾಯಿ "ಅವರ ಮಾತೇನು ಬಿಡಪ್ಪಾ, ನಾನು ಹೇಳುತ್ತೇನೆ. ನಿನ್ನ ಅಕ್ಕನ ಹೆಸರು ಭ್ರಮರಾಂಬೆ. ನಿನ್ನ ಬಾವ ಮಲ್ಲಣ್ಣ. ಅವರ ಮನೆ ಶ್ರೀಶೈಲ ಪರ್ವತದ ಮೇಲೆ ಇದೆ. ಅವರಿಗೆ ಅಷ್ಟೈಶ್ವರ್ಯಗಳೂ ಇವೆ. ಗಣಪತಿ, ಕುಮಾರಸ್ವಾಮಿ ಎಂಬ ಮಗಂದಿರು ಅವರಿಗಿದ್ದಾರೆ. ಆ ನಿನ್ನ ಬಾವ ಸರ್ವೇಶ್ವರನು. ಲೋಕದವರೆಲ್ಲ ಅವನು ಹೇಳಿದಂತೆ ನಡೆದುಕೊಳ್ಳುತ್ತಾರೆ. ನಿನ್ನ ಬಾವನಂಥ ಬಾವ ಪ್ರಪಂಚದಲ್ಲಿ ಬೇರೆ ಯಾರಿಗೂ ಇಲ್ಲ. ಗೊತ್ತಾಯಿತೇನಪ್ಪಾ?" ಎಂದಳು.





# ಮೇಲು, ಕೀಳು

ಈ ಪ್ರಪಂಚದಲ್ಲಿ ಯಾರು ಮೇಲು, ಯಾರು ಕೀಳು ? ಒಬ್ಬ ವೇದಾಂತಿಗೂ, ಒಬ್ಬ ರೈತನಿಗೂ ನಡುವೆ ಈ ವಿಷಯದಲ್ಲಿ ವಾದವೇ ಉಂಟಾಯಿತು. ಅದೂ ಇದೂ ಮಾತಾಡಿಕೊಂಡಿರುವಾಗ ಅವರೊಳಗೆ ಮೇಲಿನ ಪ್ರಶ್ನೆ ಎದ್ದಿತ್ತು.

"ನೋಡಪ್ಪಾ, ನೀನು ಎಷ್ಟಾದರೂ ಮೈ ಬಗ್ಗಿಸುವ ರೈತ. ನೀರು ಹಾಯಿಸುವುದು, ಗದ್ದೆ ಹೂಡುವುದು, ಬೀಜ ಬಿತ್ತುವುದು, ಪೈರು ನೆಡುವುದು, ಕಳೆ ಕೀಳುವುದು ಹೀಗೆ ಯಾವಾಗಲೂ ಕೆಲಸ, ಕೆಲಸ, ಕೆಲಸ. ನಿನ್ನ ಮನಸ್ಸಿನಲ್ಲಿರುವ ಕಳೆ ಕೂಡಾ ಇನ್ನೊಬ್ಬರು ತೆಗೆಯಬೇಕಾಗಿದೆಯಪ್ಪಾ. ಇಲ್ಲದಿದ್ದರೆ ಆ ಮರಕ್ಕೂ ನಿನಗೂ ಏನು ವ್ಯತ್ಯಾಸವಿದೆ ಹೇಳು ? " ಎಂದನು ವೇದಾಂತಿ.

ಅದಕ್ಕೆ ರೈತನು, "ಅಯ್ಯಾ, ವೇದಾಂತಿಯವರೇ, ನಮ್ಮ ಮಾನವ ಸಂಘದಲ್ಲಿ ನಿಮಗಿಂತಲೂ ನಾವೇ ಹೆಚ್ಚಿಗೆ ಮೇಲು ಮಾಡುವವರೆಂದು ನಿಮಗೆ ಗೊತ್ತಿಲ್ಲವೆಂದು ಕಾಣುತ್ತದೆ. ನೀವು ಬೋಧಿಸುವ ವೇದಾಂತದ ಮಾತುಗಳನ್ನು ಕೇಳದೆ ಹೋದರೂ ಲೋಕದವರು ಬದುಕಿಕೊಂಡಿರಬಹುದು. ನಾವು ಬೆಳೆಸುವ ಧಾನ್ಯಗಳು ಇಲ್ಲದೆ ಹೋದರೆ ಯಾರೂ ಬದುಕಿರಲಾರರು. ಏನನ್ನುವಿರಿ ? " ಎಂದನು.

ವೇದಾಂತಿ ಆಲೋಚನೆಗೆ ಬಿದ್ದನು.

ಆಗ ರೈತನು, "ಇದರಲ್ಲಿ ಅಷ್ಟು ಆಲೋಚನೆ ಮಾಡಲಿಕ್ಕೆ ಏನಿದೆ ಸ್ವಾಮಿ ? ಒಂದು ಸಣ್ಣ ಕಥೆ ಹೇಳುತ್ತೇನೆ, ಕೇಳಿರಿ. ಹೀಗೆಯೇ ಒಂದು ಸಾರಿ ಒಂದು ಕಲ್ಲಿಗೂ, ಕೆಸರು ಮಣ್ಣಿಗೂ ವಿವಾದ ಬಂತು. 'ನಾನು ನೋಡು, ಎಷ್ಟು ಬಲವಾಗಿ ಶುಭ್ರವಾಗಿ, ನೋಡಲು ಚೆಂದವಾಗಿದ್ದೇನೆ. ನೀನು ಹೀಗಿರುವಿಯಾ ? ' ಎಂದು ಗರ್ವದಿಂದ ಹೇಳಿತು ಕಲ್ಲು. ಅಷ್ಟು ಹೇಳಿ ಸುಮ್ಮನಿರದೆ 'ಛೀ ಛೀ ! ನಿನ್ನನ್ನು ಮುಟ್ಟಿದರೇನೇ ಪಿಸಿಪಿಸಿ ಕೊಳಕಾಗಿ ಹೋಗುತ್ತದೆ. ತುಳಿದರಂತೂ ಅಸಹ್ಯ. ಕಾಲು ತೊಳೆದುಕೊಳ್ಳಬೇಕು ' ಎಂದು ಅವಹೇಳನೆ ಕೂಡಾ ಮಾಡಿತು.

ಗರ್ವಿಯಾದ ಕಲ್ಲು ಹಾಗೆ ಹೇಳಿದ ಕೂಡಲೇ ಕೆಸರು ಮಣ್ಣಿಗೆ ಪೌರುಷವೆದ್ದಿತು. 'ಓ ಪಾಷಾಣವೇ! ನೋಡಲಿಕ್ಕೆ ನಾನು ಅಸಹ್ಯವಾಗಿಯೇ ಇರಬಹುದು, ಆದರೆ ಮಾನವರ ಪ್ರಾಣಗಳನ್ನು ಉಳಿಸುವ ಪೈರು ಪಚ್ಚೆಗಳಿಗೆ ಜೀವ ತುಂಬುವವನು ಯಾರು

ಗೊತ್ತೇನು ? ನಾನೇ ! ನೀನು ಯಾವ ಬೆಳೆ ಬೆಳೆಸುತ್ತೀ ಹೇಳು ' ಎಂದಿತು ಕೆಸರು ಮಣ್ಣು."

ರೈತನು ಹೇಳಿದ ಈ ಕಥೆಯನ್ನು ಕೇಳಿ ವೇದಾಂತಿ, "ಹೌದಪ್ಪಾ. ಕೆಸರು ಮಣ್ಣು ಹೇಳಿದ ಉತ್ತರವನ್ನು ಅಲ್ಲವೆನ್ನಲು ಸಾಧ್ಯವಿಲ್ಲ, ನಿಜವೇ. ಆದರೆ ಎರಡನೇ ಪಕ್ಷವನ್ನೂ ಆಲೋಚನೆ ಮಾಡಬೇಕು, ಕೆಸರಿನ ಸಹಾಯದಿಂದ ಪೈರು ಬೆಳೆಯುತ್ತಿದ್ದರೆ, ದೊಡ್ಡ ದೊಡ್ಡ ಭವನ, ಗುಡಿಗೋಪುರಗಳನ್ನು ನಿರ್ಮಿಸಲಿಕ್ಕೆ ಕಲ್ಲುಗಳು ವಿನಿಯೋಗವಾಗುತ್ತವೆ. ಪೈರುಗಳ ರಕ್ಷಣೆಯ ಗೋಡೆಗಳಿಗೂ ಕಲ್ಲುಗಳು ಬೇಕು. ಆದುದರಿಂದ ಪ್ರತಿಯೊಂದೂ ಉಪಯೋಗವೇ ಅನ್ನು " ಎಂದು ವಾದಿಸಿದನು.

"ಸರಿ. ಈಗ ನೀವು ದಾರಿಗೆ ಬರುವ ಹಾಗೆ ಕಾಣುತ್ತದೆ. ಪ್ರತಿಯೊಬ್ಬನ ಉಪಯೋಗವೂ, ಪ್ರತಿ ವಸ್ತುವಿನ ಉಪಯೋಗವೂ ಪ್ರಪಂಚಕ್ಕೆ ಇದೆ ಎಂಬುದನ್ನು ಒಪ್ಪಿಕೊಳ್ಳುವಿರೆಂದಾಯಿತು. ನಿಮಗೆ ಇನ್ನೊಂದು ಸಣ್ಣ ಕಥೆ, ಗೊತ್ತಿದೆಯೋ ಇಲ್ಲವೋ ? ಕೇಳಿರಿ. ಆಮೇಲೆ ನಿಮ್ಮ ಅಭಿಪ್ರಾಯ ಹೇಳಿರಿ " ಎಂದು ರೈತನು ಇನ್ನೊಂದು ಕಥೆಯನ್ನು ಎತ್ತಿದನು.

"ಒಂದು ಕಾಡಿನಲ್ಲಿ ಒಂದು ಆಲದ ಮರವೂ ಒಂದು ತೇಗಿನ ಮರವೂ ಇದ್ದುವು. ಒಂದು ಸಾರಿ ಆಲದ ಮರವು ತೇಗಿನ ಮರದೊಂದಿಗೆ, 'ನಾನು ಲಕ್ಷಗಟ್ಲೆ ಜೀವಿಗಳಿಗೆ ನೆರಳು ಕೊಡುವವನು. ನಿನಗೆ ಮೊರದಗಲದ ಎಲೆಗಳಿವೆಯೆಂದು ಮಾತೇ ಹೊರತು ನಿನ್ನಿಂದ ನನ್ನಷ್ಟು ಉಪಕಾರವೇನೂ ಇಲ್ಲ. ಎಷ್ಟಾದರೂ ಹರಕು ನೆರಳೇ ನಿನ್ನದು' ಎಂದಿತು ಹೆಮ್ಮೆಯಿಂದ.

ಅದನ್ನು ಕೇಳಿ ತೇಗಿನ ಮರವು, 'ಓ ಗರ್ವಿಷ್ಠ ಆಲನೇ ! ನಿನ್ನ ಅಹಂಕಾರವನ್ನು ಮೂಟೆಕಟ್ಟಿ ಹಾಗಿಡು. ನಿನ್ನ ಬೃಹದಾಕಾರವೂ, ನೆರಳೂ ಯಾವ ಮೂಲೆಗೆ ? ಎಷ್ಟೋ ಕಾಲದಿಂದ ಶಾಶ್ವತವಾದ ಮನೆಮಠಗಳನ್ನು ಕಟ್ಟಲು ಮನುಷ್ಯರಿಗೆ ನನ್ನಷ್ಟು ಉಪಯೋಗ ನಿನ್ನಲ್ಲೇನಿದೆ ? ನಿನ್ನದೆಲ್ಲಾ ತಾತ್ಕಾಲಿಕ ಉಪಯೋಗವಾದರೆ, ನನ್ನದು ಶಾಶ್ವತ ಉಪಯೋಗ!' ಎಂದು ರಾಚುವಂತೆ ಉತ್ತರ ಕೊಟ್ಟಿತು."

ಹೀಗೆ ರೈತನು ಹೇಳಿದುದನ್ನು ಕೇಳಿ, ವೇದಾಂತಿ ರೈತನನ್ನು ಅತ್ಯಾದರದಿಂದ ಮೆಚ್ಚಿಕೊಂಡು, "ನಿಜವಪ್ಪ. ನೀನು ಶರೀರಕ್ಕೆ ನೆರಳು ನೀಡುವ ಆಲದ ಮರದಂಥವನು ; ನಾನು ಮನಸ್ಸಿಗೆ ಶಾಂತಿ ನೀಡುವ ತೇಗಿನ ಮರದಂಥವನು. ಪೈರಿಗೆ ಜೀವ ತುಂಬುವ ಕೆಸರು ಮಣ್ಣು ನೀನು ; ರಕ್ಷಣೆ ನೀಡುವ ಕಲ್ಲುಬಂಡೆ ನಾನು. ಅಂದರೇನು ಗೊತ್ತೇ ನಮ್ಮೊಳಗೆ ಮೇಲು ಕೀಳು ಎಂಬುದು ಇಲ್ಲವೇ ಇಲ್ಲ. ಲೋಕಕ್ಕೆ ನಾವಿಬ್ಬರೂ ಅಗತ್ಯವೇ " ಎಂದನು ಒಪ್ಪುವಂತೆ.





# ಕಳ್ಳನ ಪತ್ತೆ

ಒಂದುಸಾರಿ ಒಂದು ಊರಿನ ರತ್ನಗುಪ್ತನೆಂಬ ಧನಿಕ ವರ್ತಕನ ಮನೆಯಲ್ಲಿ ಕಳ್ಳತನವಾಗಿಬಿಟ್ಟಿತು. ಮನೆಯೊಳಗಿದ್ದ ಹತ್ತು ಸಾವಿರ ವರಹಗಳು ಮಾಯವಾಗಿ ಹೋಗಿದ್ದುವು. ರಾತ್ರಿ ಮಲಗುವಾಗ ಎಣಿಸಿಟ್ಟ ಹಣ, ಬೆಳಗಾದಾಗ ಇಲ್ಲವಾಗಿತ್ತು.

ಹಣವಿದ್ದ ಕೋಣೆಯ ಪಕ್ಕದಲ್ಲಿದ್ದ ಹಜಾರದಲ್ಲಿ ನಾಲ್ಕು ಮಂದಿ ಆಳುಗಳು ಮಲಗಿಕೊಂಡಿದ್ದರು. ಆದುದರಿಂದ ರತ್ನಗುಪ್ತನ ಅನುಮಾನವು ಆ ಕೆಲಸದಾಳುಗಳ ಮೇಲೆಯೇ ಬಿದ್ದಿತು.

ರತ್ನಗುಪ್ತನ ಅಸಲು ಸ್ವಭಾವವು ಸಾಧುತನವೇ. ಯಾರನ್ನೇ . ಆಗಲಿ, ಕಠಿಣವಾಗಿ ದಂಡಿಸಲು ಅವನಿಂದಾಗದು. ಅವನಿಗೆ ವ್ಯಾಪಾರ ವ್ಯವಹಾರಗಳಲ್ಲಿ ಎಡ ಬಲ ಕೈಗಳಂತಿರುವ ಸೋಮಶಾಸ್ತ್ರಿ ಅತ್ಯಂತ ಬುದ್ಧಿವಂತನಾಗಿದ್ದನು.

ರತ್ನಗುಪ್ತನು ನಡೆದ ಸಮಾಚಾರವನ್ನು ಸೋಮಶಾಸ್ತ್ರಿಯೊಂದಿಗೆ ಹೇಳಿ, "ಆ ಕೆಲಸದಾಳುಗಳ ಮನಸ್ಸಿಗೆ ನೋವು ಬಾರದಂತೆ ಅವರಲ್ಲಿ ಕಳ್ಳನಾರೆಂಬುದನ್ನು ಕಂಡುಹಿಡಿಯಬೇಕು. ಹೇಗೆ?" ಎಂದು ಕೇಳಿದನು.

"ನಾನು ನೋಡಿಕೊಳ್ಳುತ್ತೇನೆ" ಎಂದು ಸೋಮಶಾಸ್ತ್ರಿ ನಾಲ್ಕು ಮಂದಿ ಕೆಲಸದಾಳುಗಳನ್ನು ಒಂದು ಕೋಣೆಗೆ ಕರೆದನು. ಅವರೊಂದಿಗೆ ಸೋಮಶಾಸ್ತ್ರಿ, "ನೋಡಿ, ನೀವು ನಾಲ್ವರೂ ಹಣವಿರುವ ಕೋಣೆಯ ಹತ್ತಿರದಲ್ಲೇ ಮಲಗಿಕೊಂಡಿದ್ದಿರಿ. ಹೇಗೋ ಹಣದ ಕೋಣೆಯೊಳಗೆ ಕಳ್ಳತನವಾಗಿದೆ. ರತ್ನಗುಪ್ತರು ಬಹಳ ಒಳ್ಳೆಯವರಾದುದರಿಂದ ನಿಮ್ಮನ್ನು ರಾಜಭಟರ ವಶಕ್ಕೆ ಒಪ್ಪಿಸಲು ಇಷ್ಟಪಡುವುದಿಲ್ಲ. ಈಗ ನಡೆದುದೇನೋ ನಡೆದು ಹೋಗಿದೆ, ಹೋದ ಹಣ ಇವತ್ತು ಸಾಯಂಕಾಲಗೊಳಗೆ ಅಲ್ಲಿಗೆ ಬಂದು ಸೇರಿಬಿಡಬೇಕು, ಹಾಗೆ ಹಣ ಬಾರದೆ ಹೋದ ಪಕ್ಷದಲ್ಲಿ ನೀವು ನಾಲ್ವರೂ ಸಹಿಸಲಾಗದಷ್ಟು ಕಷ್ಟಗಳಿಗೆ ಗುರಿಯಾಗುವಿರಿ! ನೆನಪಿರಲಿ! ಜಾಗ್ರತೆ!" ಎಂದನು.

ರಂಗಯ್ಯ, ರಾಮಯ್ಯ, ಧರ್ಮಯ್ಯ, ಭೀಮಯ್ಯ ಎಂಬ ಆ ನಾಲ್ವರು ಕೆಲಸದಾಳುಗಳೂ ಬಾಯಿ ಮುಚ್ಚಿ ತಲೆ ತಗ್ಗಿಸಿ ಸೋಮಶಾಸ್ತ್ರಿ ಹೇಳುವುದನ್ನು ಕೇಳಿದರು. ಆ ದಿನವಿಡೀ ಸೋಮಶಾಸ್ತ್ರಿ ರಹಸ್ಯವಾಗಿ ಅವರ ಮೇಲೆ ಒಂದು ಕಣ್ಣು ಇಟ್ಟುಕೊಂಡೇ

"ವಸುಂಧರ"



ಇದ್ದನು, ಆ ಕೆಲಸದಾಳುಗಳು ಯಾವ ವ್ಯತ್ಯಾಸವನ್ನೂ ತೋರ್ಪಡಿಸದೆ, ಎಂದಿನಂತೆ ತಮ್ಮ ತಮ್ಮ ಕೆಲಸಗಳನ್ನು ಮಾಡಿ ಮುಗಿಸಿ ಹೊರಟು ಹೋದರು. ಆ ದಿನ ಸಾಯಂಕಾಲದ ಹೊತ್ತು ದಾಟಿ, ರಾತ್ರಿಯೂ ಬಂದಿತು. ಹೋದ ಹಣ ಯಥಾ ಸ್ಥಾನಕ್ಕೆ ಬಂದು ಸೇರಲೇ ಇಲ್ಲ.

ಮರುದಿನ ಸೋಮಶಾಸ್ತ್ರಿ ಆ ನಾಲ್ವರು ಆಳುಗಳನ್ನು ಬೇರೆ ಬೇರೆಯಾಗಿ ತನ್ನ ಕೋಣೆಗೆ ಕರೆದು, ಮೊದಲು ಬಂದ ಧರ್ಮಯ್ಯನೊಂದಿಗೆ, "ನೋಡಪ್ಪಾ. ನೀನೇ ಈ ಕಳ್ಳತನ ಮಾಡಿರುವೆ ಎಂಬುದಕ್ಕೆ ನನಗೆ ಕೆಲವು ಸಾಕ್ಷಿಗಳು ದೊರಕಿವೆ. ಮರ್ಯಾದೆಯಿಂದ ಕದ್ದುದನ್ನು ತಂದು ಒಪ್ಪಿಸಿದರೆ ನಿನ್ನನ್ನು ಕ್ಷಮಿಸಿಬಿಡುತ್ತೇವೆ" ಎಂದನು.

ಧರ್ಮಯ್ಯನು ಏನೋ ದೊಡ್ಡ ಪೆಟ್ಟು ಬಿದ್ದವನಂತೆ ಬೆಪ್ಪಾಗಿ. ಸ್ವಲ್ಪ ಹೊತ್ತಿನ ಮೇಲೆ, "ನಾನು ಈ ಮನೆಯಲ್ಲಿ ಹತ್ತು ವರ್ಷಗಳಿಂದ ಕೆಲಸ ಮಾಡುತ್ತಿದ್ದೇನೆ, ಎಂದೂ ಇಂತಹ ಹೀನ ಮಾತು ಕೇಳಿದವನಲ್ಲ. ಅಯ್ಯಾ, ಅವರ ಉಪ್ಪು ತಿಂದು ಅವರಿಗೆ ದ್ರೋಹ ಮಾಡಿದೆನೆಂಬ ಮಾತು ಬಂದ ಮೇಲೆ ನಾನು ಬದುಕಿ ಕೂಡಾ ಪ್ರಯೋಜನವೇನಿಲ್ಲ. ಹಾಳು ಪ್ರಾಣ ಹೋದರೇ ಒಳ್ಳೇದು" ಎಂದು ವೇದನೆಯಿಂದ ನರಳುವಂತೆ ಹೇಳಿದನು.

ಸೋಮಶಾಸ್ತ್ರಿ ಧರ್ಮಯ್ಯನನ್ನು ಹೋಗಲು ಹೇಳಿದ ಮೇಲೆ, ರಂಗಯ್ಯನನ್ನು ಕರೆಯಿಸಿದನು. ಅವನಿಗೂ ಧರ್ಮಯ್ಯನಿಗೆ ಹೇಳಿದ ಮಾತುಗಳನ್ನೇ ಹೇಳಿದನು. ಅದನ್ನು ಕೇಳಿ ಅವನು ಗದಗದ ನಡುಗುತ್ತ, "ಅಯ್ಯೋ, ಸ್ವಾಮೀ ! ನೀವೇ ನನ್ನನ್ನು ರಕ್ಷಿಸಬೇಕು. ನಿಜವಾಗಿಯೂ ನನಗೆ ಒಂದೂ ಗೊತ್ತಿಲ್ಲ !" ಎನ್ನುತ್ತಾ, ಸೋಮಶಾಸ್ತ್ರಿಯ ಎರಡು ಕಾಲುಗಳನ್ನೂ ಹಿಡಿದನು.

"ನೀನು ತಪ್ಪು ಮಾಡದೇ ಹೋದರೆ ಹೀಗೆ ಹೆದರುವುದೇಕೆ ? ನೀನು ಕದ್ದಿರುವುದಕ್ಕೆ ಏನು ರುಜುವೆಂಬುದನ್ನು ನಾಳೆ ತೋರಿಸುತ್ತೇನೆ. ಈಗ ಹೋಗು" ಎಂದು ಅವನನ್ನು ಕಳುಹಿಸಿ, ರಾಮಯ್ಯನನ್ನು ತನ್ನ ಬಳಿಗೆ ಬರಮಾಡಿಕೊಂಡನು ಸೋಮಶಾಸ್ತ್ರಿ.

ಸೋಮಶಾಸ್ತ್ರಿ ರಾಮಯ್ಯನನ್ನು ಕಳ್ಳನೆಂದು ಹೇಳಿದ ಕೂಡಲೇ ಅವನು ಕೋಪದಿಂದ, "ಏನಿದು ಸ್ವಾಮಿ, ಹೇಳುವುದನ್ನು ಜಾಗರೂಕತೆಯಿಂದ ಹೇಳಿರಿ. ನೀವು ದೊಡ್ಡವರಾಗಿರಬಹುದು, ನಾವು ಬಡವರಾಗಿದ್ದೇವು. ಹಾಗಂತ ನೀವು ಬಾಯಿಗೆ ಬಂದ ಹಾಗೆಲ್ಲಾ ಹೇಳಿದರೆ ನಾನು ಸಹಿಸಲಾರೆ !" ಎಂದನು.

"ಇಂತಹ ಬೆದರಿಸುವಿಕೆಗೆಲ್ಲಾ ಹೆದರುವವನು ನಾನಲ್ಲ. ನೀವುಗಳು ಮಲಗಿದ ಪಕ್ಕದ ಕೋಣೆಯಲ್ಲೇ ಕಳ್ಳತನ ನಡೆದಿರುವಾಗ, ಅದರಲ್ಲಿ ನಿಮಗೂ ಪಾಲಿದೆ ಎಂದೇ ಆಯಿತು. ನಿಮ್ಮನ್ನು ಆ ಹಜಾರದಲ್ಲಿ



ಏಕೆ ಮಲಗಲು ಹೇಳಿದ್ದು ? ಏನೂ ಕಳ್ಳತನ ನಡೆಯ ಬಾರದೆಂದು ತಾನೇ ? ನಿಮ್ಮ ಹೊಣೆಗಾರಿಕೆಯನ್ನೇ ಮರೆತಿದ್ದೀರಿ. ಈಗ ಹೋಗು. ನನ್ನ ಹತ್ತಿರವಿರುವ ರುಜುಗಳು ಏನೆಂಬುದನ್ನು ನಾಳೆ ಹೇಳುತ್ತೇನೆ" ಎಂದು ಅವನನ್ನು ಕಳುಹಿಸಿದನು ಸೋಮಶಾಸ್ತ್ರಿ.

ಕಡೆಗೆ ಬಂದ ನಾಲ್ಕನೆಯ ಭೀಮಯ್ಯ ಕೂಡಾ ರಾಮಯ್ಯನ ಹಾಗೆಯೇ ಸೋಮಯ್ಯನ ಮೇಲೆ ಕೋಪದ ಮಾತುಗಳನ್ನಾಡಿದನು. ಅದಕ್ಕೆ ಸೋಮ ಶಾಸ್ತ್ರಿ ಮನೆಗೆ ಕಳ್ಳರು ನುಗ್ಗಿ ದೋಚಿಕೊಂಡು ಹೋಗುವಾಗ ಮೈ ತಿಳಿಯದ ಹಾಗೆ ನಿದ್ದೆಮಾಡಿದೆ ನೆನ್ನೆ ! ಅದುಮಾತ್ರ ತಪ್ಪಲ್ಲವೇನು ?" ಎಂದು ಕೇಳಿದನು.

ಭೀಮಯ್ಯ ಕೋಪದಿಂದಲೇ "ನಾವು ಈ ಮನೆಯಲ್ಲಿ ಕೆಲಸ ಮಾಡಲಿಕ್ಕಷ್ಟೇ ಬಾಧ್ಯರು. ಕಾವಲು ಕಾಯುವುದು ನಮ್ಮ ಕೆಲಸವೇನಲ್ಲ. ಸುಮ್ಮನೆ ಮಲಗಲು ಹೇಳಿದಿರಿ ಅಷ್ಟೇ. ದಿನವಿಡೀ ಕಷ್ಟಪಟ್ಟು ಕೆಲಸ ಮಾಡಿದವರಿಗೆ ಮೈಮರೆಯುವ ಹಾಗೆ ನಿದ್ದೆ ಬರುವುದರಲ್ಲಿ ಆಶ್ಚರ್ಯವೇನಿದೆ ? ಬೇಕಾದರೆ ನಮ್ಮನ್ನು ಕಾವಲಿಗೆಂದೇ ನಿಯಮಿಸಿರಿ. ಆಗ ನಾವು ಹಗಲೆಲ್ಲಾ ನಿದ್ದೆ ಮಾಡಿ ರಾತ್ರಿಯಲ್ಲಿ ಎಚ್ಚರಿಕೆಯಿಂದ ಕಾಯುತ್ತೇವೆ. ಆಗ ಮನೆಯೊಳಗೇನಾದರೂ ಕಳತನವಾದರೆ ನಮ್ಮ ಮೇಲೆ ತಪ್ಪು ಹಾಕಿರಿ" ಎಂದನು.

ಸೋಮಶಾಸ್ತ್ರಿ ಅವನನ್ನು ಕೂಡಾ ಹೋಗಲು ಹೇಳಿ, ರತ್ನಗುಪ್ತನ ಬಳಿಗೆ ಹೋಗಿ, "ನನ್ನ ವಿಚಾರಣೆಯಲ್ಲಿ ಗೊತ್ತಾದುದೇನಂದರೆ, ಈ ಕಳ್ಳತನವನ್ನು ನಾಲ್ವರೂ ಸೇರಿ ಮಾಡಿದ್ದು ಅಲ್ಲ. ಇದರಲ್ಲಿ ಧರ್ಮಯ್ಯನೂ ರಾಮಯ್ಯನೂ ಪೂರ್ತಿ ನಿರ್ದೋಷಿಗಳು. ನನ್ನ ಅನುಮಾನದಲ್ಲಿ ರಂಗಯ್ಯನೇ ಕಳ್ಳನಾಗಿರುವನೆಂದಿದೆ. ಅವನೂ ಭೀಮಯ್ಯನೂ ಕೂಡಿ ಈ ಕಳ್ಳತನ ಮಾಡಿರಬೇಕು. ಅವರಿರುವ ಕೋಣೆಗಳೆರಡನ್ನೂ ಪೂರ್ತಿ ಶೋಧಿಸಿ ಯಾರೆಂಬುದನ್ನು ನಿರ್ಧರಿಸಬೇಕು" ಎಂದು ಹೇಳಿದನು.

ರತ್ನಗುಪ್ತನು ತನ್ನ ಮನೆಯ ಹಿಂದಿನ ಆವರಣದಲ್ಲಿ ಆ ನಾಲ್ವರು ಆಳುಗಳಿಗಾಗಿ ದೊಡ್ಡ ಕೋಣೆಗಳನ್ನೇ ಕಟ್ಟಿಸಿದ್ದನು. ಅವರ ಕುಟುಂಬಗಳು ಅದರಲ್ಲೇ ಇರುತ್ತವೆ. ರಾತ್ರಿಯಲ್ಲಿ ಮಾತ್ರ ರತ್ನಗುಪ್ತನ ಮನೆಯೊಳಗಿನ ಹಜಾರದಲ್ಲಿ ಆ ನಾಲ್ವರನ್ನೂ ಮಲಗಲು ಹೇಳಲ್ಪಟ್ಟಿತ್ತು. ಅದಕ್ಕಾಗಿ ಪ್ರತ್ಯೇಕ ಸಂಬಳವೇನಿರಲಿಲ್ಲ.

ಎಷ್ಟು ಹುಡುಕಿಸಿದರೂ ರಂಗಯ್ಯ ಭೀಮಯ್ಯರ ಕೋಣೆಗಳಲ್ಲಿ ಕಳವಿನ ವಸ್ತುಗಳಾವುದೂ ದೊರಕಲಿಲ್ಲ. ಆಗ ಸೋಮಶಾಸ್ತ್ರಿ ರತ್ನಗುಪ್ತನೊಂದಿಗೆ "ಈಗ ನೋಡುವಾಗ ಭೀಮಯ್ಯ ಕೂಡಾ ನಿರ್ದೋಷಿಯಾಗಿದ್ದಾನೆ. ಆದ್ದರಿಂದ ರಂಗಯ್ಯನೇ ದೋಷಿ. ಅವನೇ ಕಳ್ಳತನ ಮಾಡಿರಬೇಕು. ಅಥವಾ ಕಳ್ಳನು ಯಾರೆಂದು ಅವನಿಗೆ ಗೊತ್ತಿರಲೇಬೇಕು" ಎಂದನು.



"ಆದರೆ ಆ ಸಂಗತಿಯನ್ನು ಅವನಿಂದ ಒಪ್ಪಿಸುವುದು ಹೇಗೆ?" ಎಂದು ರತ್ನಗುಪ್ತನು ಕೇಳಿದನು.

"ನೆರಳಿನ ಹಾಗೆ ಅವನನ್ನು ನೋಡಿಕೊಂಡಿರಬೇಕು, ಬೇರೆ ದಾರಿ ಇಲ್ಲ" ಎಂದನು ಸೋಮಶಾಸ್ತ್ರಿ.

ರತ್ನಗುಪ್ತನು ಅಂತಹ ರಹಸ್ಯ ಏರ್ಪಾಡನ್ನು ಮಾಡಿದನು. ಇದು ನಡೆದು ಹತ್ತು ದಿನಗಳ ಮೇಲೆ ರಂಗಯ್ಯನು ಸಂತೆಯಲ್ಲಿ ಪಟ್ಟೆ ಸೀರೆಯನ್ನು ಕೊಂಡುಕೊಳ್ಳಲು ಚೌಕಾಸಿ ಮಾಡಿಕೊಂಡಿರುವಾಗ ಸೋಮಶಾಸ್ತ್ರಿಯ ಕೈಗೆ ಸಿಕ್ಕಿಬಿದ್ದನು. ಆಗ ಅವನ ಟೊಂಕದಲ್ಲಿ ಹುಡುಕಿದಾಗ ನೂರು ವರಹಗಳು ಸಿಕ್ಕಿದುವು.

"ಇಷ್ಟು ಹಣ ನಿನಗೆ ಎಲ್ಲಿಂದ ಬಂತು? ಹೇಳು" ಎಂದು ಸೋಮಶಾಸ್ತ್ರಿ ಅವನನ್ನು ಕೇಳಿದನು.

ರಂಗಯ್ಯನು ಭೀತನಾದನು. ಅವನ ಬಾಯಿಯಿಂದ ಯಾವ ಉತ್ತರವೂ ಹೊರಡದೆ ತಬ್ಬಿಬ್ಬಾದನು. ಸೋಮಶಾಸ್ತ್ರಿ ಅವನನ್ನು ರತ್ನಗುಪ್ತನ ಬಳಿಗೆ ಕರೆದುಕೊಂಡು ಹೋದನು.

ಸೋಮಶಾಸ್ತ್ರಿ ಹೇಳಿದಂತೆ ರಂಗಯ್ಯನೇ ಕಳ್ಳನೆಂದಾದುದನ್ನು ನೋಡಿ, ರತ್ನಗುಪ್ತನು ಆಶ್ಚರ್ಯಪಟ್ಟು, ಉಳಿದ ಹಣವೆಲ್ಲ ತೆಗೆದುಕೊಂಡು ಒರುವಂತೆ ಅವನಿಗೆ ಹೇಳಿದನು.

ರಂಗಯ್ಯ ಇನ್ನಿಷ್ಟು ಹೆದರಿ ನಡುಗುತ್ತ "ಅಯ್ಯಾ, ಈ ಕಳ್ಳತನವನ್ನು ನಾನು ಮಾಡಲೇ ಇಲ್ಲ" ಎಂದನು.

"ಹಾಗಾದರೆ ಯಾರು ಮಾಡಿದರು?" ಎಂದು ಕೇಳಿದನು ರತ್ನಗುಪ್ತ.

"ಅದನ್ನು ಹೇಳಿಬಿಟ್ಟರೆ ಧನಗುಪ್ತರು ನನ್ನನ್ನು ಕೊಂದುಬಿಡುತ್ತಾರೆ!" ಎಂದನು ರಂಗಯ್ಯ.

ಧನಗುಪ್ತನ ಹೆಸರು ಕೇಳಿದ ಕೂಡಲೇ ರತ್ನಗುಪ್ತನು ಮೆಟ್ಟಿಬಿದ್ದನು. ಅವನು ರತ್ನಗುಪ್ತನ ಹೆಂಡತಿಯ ತಮ್ಮ. ಅವನು ಯಾವ ಕೆಲಸವನ್ನೂ ಮಾಡದೆ ಜಂಬದ ವೇಷದಲ್ಲಿ ಅವನಂತಹ ಬಚ್ಚಾಳಿಗಳ ಜತೆಯಲ್ಲಿ ತಿರುಗುವವನೆಂದು ಮಾಮಯ್ಯ ಅವನನ್ನು ರತ್ನಗುಪ್ತನ ಬಳಿಗೆ ಕಳುಹಿಸಿಕೊಟ್ಟಿದ್ದನು.

"ಏನು ನಡೆಯಿತೆಂಬುದನ್ನು ಧೈರ್ಯದಿಂದ ಹೆದರದೆ ಹೇಳಿಬಿಡು. ನಾನು ನೋಡಿಕೊಳ್ಳುತ್ತೇನೆ" ಎಂದನು ರತ್ನಗುಪ್ತ.

ಆಗ ರಂಗಯ್ಯ, "ಅಯ್ಯಾ, ನಾವು ನಾಲ್ವರೂ ಮಲಗುವ ಹಜಾರದ ಆ ಕೋಣೆಯಲ್ಲಿ, ತಾವು ಹಣ ಮೊದಲಾದ ಬೆಲೆಬಾಳುವ ವಸ್ತುಗಳನ್ನು ಭದ್ರವಾಗಿರಿಸುವಿರೆಂದು ನಮಗೆ ಗೊತ್ತಿದೆ. ಆದುದರಿಂದ ನಾವು ಸರದಿಯ ಮೇಲೆ ಒಬ್ಬೊಬ್ಬರು ಎಚ್ಚರದಲ್ಲಿದ್ದು ಉಳಿದವರು ನಿದ್ದೆ ಮಾಡುತ್ತೇವೆ. ಆ ದಿನ ರಾತ್ರಿ ನಾನು ಎಚ್ಚರದಲ್ಲಿರುವ ಸಮಯದಲ್ಲಿ ಧನಗುಪ್ತರು ಬೆಕ್ಕಿನ ಹಾಗೆ ಅಡಿ ಮೇಲೆ ಅಡಿಯಿಡುತ್ತ ಅಲ್ಲಿಗೆ ಬಂದರು. ಅವರ ಕೈಯಲ್ಲಿ ಕತ್ತಿ ಥಳಥಳಿಸುತ್ತಿದ್ದಿತು. ಯಾರೊಡನೆಯಾದರೂ

ಹೇಳಿದರೆ ತಿವಿದು ಕೊಂದುಬಿಡುತ್ತೇನೆಂದು ನನ್ನನ್ನು ಹೆದರಿಸಿ, ಬೇರೆ ಬೀಗದ ಕೈಯ ಸಹಾಯದಲ್ಲಿ ಹಣವಿರುವ ಕೋಣೆಗೆ ಹೋಗಿ ಕದ್ದುಕೊಂಡಿದ್ದಾರೆ. ಕದ್ದ ಹಣದಲ್ಲಿ ನನಗೆ ಇನ್ನೂರು ವರಹಗಳನ್ನು ಲಂಚವಾಗಿ ಕೊಟ್ಟರು. ಆ ಹಣವನ್ನು ನಾನು ಧನಗುಪ್ತರ ಕೋಣೆಯೊಳಗೇ ಅಡಗಿಸಿಟ್ಟೆನು" ಎಂದು ಹೇಳಿದನು.

ಇದನ್ನು ಕೇಳಿ ರತ್ನಗುಪ್ತನು ಧನಗುಪ್ತನ ಕೋಣೆಯೊಳಗೆ ಹುಡುಕಿಸುವಾಗ ಅಲ್ಲಿ ಎಂಟು ಸಾವಿರ ವರಹಗಳು ಸಿಕ್ಕಿದುವು. ಆಗ ಧನಗುಪ್ತನು ಮರು ಮಾತೇನೂ ಹೇಳದೆ ತನ್ನ ತಪ್ಪನ್ನು ಒಪ್ಪಿಕೊಂಡನು. ರತ್ನಗುಪ್ತನ ಹೆಂಡತಿ ತಮ್ಮನನ್ನು ಛಡಮಡನೆ ಬೈದು ಹೊರಗೆ ದೂಡಿ ಅವನನ್ನು ಮತ್ತೆ ತಂದೆಯ ಮನೆಗೆ ಕಳುಹಿಸಿಬಿಟ್ಟಳು.

ಆಮೇಲೆ ರತ್ನಗುಪ್ತನು ಸೋಮಶಾಸ್ತ್ರಿಯನ್ನು ತನ್ನ ಕೋಣೆಗೆ ಕರೆಯಿಸಿ, "ನಿನ್ನ ಮೂಲಕದಿಂದಾಗಿ ನಿಜ ವಿಷಯವು ಸುಲಭವಾಗಿ ತಿಳಿದುಹೋಯಿತು. ಉಳಿದ ಮೂವರೂ ಅಮಾಯಕರೆಂದು ನಿಶ್ಚಯಿಸಿ, ರಂಗಯ್ಯನೇ ಕಳ್ಳತನ ಮಾಡಿದನೆಂದು ನಿನಗೆ ಹೇಗೆ ಅನುಮಾನವಾಯಿತು ?" ಎಂದು ಕೇಳಿದನು.

ಸೋಮಶಾಸ್ತ್ರಿ ಸಣ್ಣಗೆ ನಗುತ್ತ, "ಇದು ಬಹಳ ಸುಲಭ. ಯಾವ ಮನುಷ್ಯನಿಗಾದರೂ ಮಾಡದ ಕಾರ್ಯವನ್ನು ನೀನೇ ಮಾಡಿದಿಯೆಂದು ತಪ್ಪು ಹಾಕಿದರೆ ಬಹಳ ಸಂಕಟವಾಗುತ್ತದೆ. ಧರ್ಮಯ್ಯ ಈ ಮನೆಯ ಉಪ್ಪು ತಿಂದವನೆಂದನು. ಅವನಿಗೆ ಆತ್ಮಾಭಿಮಾನವಿಲ್ಲ. ಆತ್ಮಾಭಿಮಾನವಿದ್ದವನು ಮಾಡದ ತಪ್ಪನ್ನು ಮಾಡಿದಿ ಅಂದರೆ ಕೋಪದಿಂದ ತಿರುಗಿ ಬೀಳುತ್ತಾನೆ. ರಾಮಯ್ಯ ಹಾಗೇ ತಿರುಗಿ ಬಿದ್ದನು. ಆದರೆ ಅವನ ಬಾಧ್ಯತೆಯನ್ನು ಸರಿಯಾಗಿ ನಿರ್ವಹಿಸಲಿಲ್ಲವೆಂದ ಕೂಡಲೇ ಸುಮ್ಮನಾಗಿಬಿಟ್ಟನು. ಭೀಮಯ್ಯ ತಿರುಗಿಬಿದ್ದದ್ದು ಮಾತ್ರವಲ್ಲದೆ, ಮನೆ ಕಾಯುವುದು ತನ್ನ ಹೊಣೆಯೇ ಅಲ್ಲವೆಂದು ಹೇಳಿಬಿಟ್ಟನು. ಆದರೆ ಅವನು ತಿರುಗಿ ಬೀಳಲು ಕಾರಣವು ಕೋಪವಲ್ಲವೆಂದಾಯಿತು. ಅವನಿಗೆ ದಭಾಯಿಸುವ ಗುಣವುಂಟು. ಅಂಥವನು ಕಳ್ಳನಾಗಿರಲೂ ಬಹುದು. ಆದರೆ ನಿಜವಾದ ಕಳ್ಳ ತನ್ನ ಮೇಲೆ ಅನುಮಾನ ಬಂದ ಕೂಡಲೇ ಹೆದರಿ ಹೋಗುತ್ತಾನೆ. ರಂಗಯ್ಯ ಹಾಗೆ ಹೆದರಿದನು. ಕಳ್ಳತನ ಮಾಡಲಿ, ಮಾಡದೆ ಹೋಗಲಿ, ಅವನಿಗೆ ಕಳ್ಳತನದ ಸಂಗತಿ ಪೂರಾ ಗೊತ್ತಿದೆಯೆಂದು ಅರ್ಥವಾಯಿತು. ಹಾಗೆಯೇ ಅವನಿಂದ ನಿಜಸಂಗತಿ ಹೊರಬಿತ್ತು" ಎಂದನು.

ರತ್ನಗುಪ್ತನು ಸೋಮಶಾಸ್ತ್ರಿಯನ್ನು ಬಹಳ ಮೆಚ್ಚಿಕೊಂಡು ಸನ್ಮಾನಿಸಿದನು.



# ಈಜು ಕಲಿತ ವೈದ್ಯ

ವೃಷಭೇಂದ್ರಯ್ಯನೆಂಬ ವೈದ್ಯನು ಒಂದು ದಿನ ಮಧ್ಯರಾತ್ರಿಯ ಸಮಯಕ್ಕೆ ನೆರೆಯ ಗ್ರಾಮದಲ್ಲಿದ್ದ ಒಬ್ಬ ರೋಗಿಗೆ ಚಿಕಿತ್ಸೆ ಮಾಡಲಿಕ್ಕಾಗಿ ಹೋಗಬೇಕಾಯಿತು. ಅಲ್ಲಿ ಅವನು ಆಲೋಚನೆ ಮಾಡದೆ ಕೊಟ್ಟ ಮದ್ದಿನಿಂದ ರೋಗಿ ಸತ್ತು ಹೋಗಿಬಿಟ್ಟನು. ರೋಗಿಯ ಬಂಧುಗಳು ಕೋಪಾವೇಶದಿಂದ ವೃಷಭೇಂದ್ರಯ್ಯನನ್ನು ಹಿಡಿದು ಮನೆಯ ಹಿಂಬದಿಯ ಮರಕ್ಕೆ ಕಟ್ಟಿಹಾಕಿ, "ನಿನಗೆ ಎಂತಹ ಶಿಕ್ಷೆ ವಿಧಿಸಬೇಕೆಂಬುದನ್ನು ಬೆಳಗಾದ ಮೇಲೆ ನಿಶ್ಚಯಿಸುತ್ತೇವೆ" ಎಂದು ಹೇಳಿ ಮನೆಯ ಬಾಗಿಲು ಹಾಕಿಕೊಂಡರು.

ಆ ರಾತ್ರಿಯಲ್ಲಿ ವೃಷಭೇಂದ್ರಯ್ಯ ಹೇಗೋ ತನ್ನ ಕಟ್ಟು ಬಿಚ್ಚಿಕೊಂಡು, ಓಡಿ ದಾರಿಯಲ್ಲಿದ್ದ ನದಿಯನ್ನು ಈಜಿ ದಾಟಿ, ಬೆಳಗಾಗುವಷ್ಟರಲ್ಲಿ ಮನೆ ಸೇರಿಕೊಂಡನು. ಆ ಸಮಯದಲ್ಲಿ ಅವನ ಮಗನು ವೈದ್ಯ ಗ್ರಂಥವನ್ನು ಓದುತ್ತಿದ್ದನು.

ವೃಷಭೇಂದ್ರಯ್ಯ ಅವನ ಬಳಿಗೆ ಹೋಗಿ, "ಅಪ್ಪಾ ಮಗನೇ, ವೈದ್ಯ ಗ್ರಂಥದಲ್ಲಿ ಹಾಗೆ ಮುಳುಗಿ ತೇಲಬೇಡ. ನನ್ನ ಹಾಗೆ ವೈದ್ಯನಾಗಬೇಕೆಂಬವನು ಮೊದಲು ಈಜು ಕಲಿತುಕೊಳ್ಳುವುದು ಮುಖ್ಯ !" ಎಂದು ಮಗನಿಗೆ ಬುದ್ಧಿ ಹೇಳಿದನು.

ಆಮೇಲೆ ವೃಷಭೇಂದ್ರಯ್ಯ ಕೆಲವು ದಿನ ಎಲ್ಲಿಗೋ ಹೋಗಿ ತಪ್ಪಿಸಿಕೊಂಡನು.





# ವಸೂಲು ಪಂದ್ಯ

ದೇವನಹಳ್ಳಿ ಎಂಬೊಂದು ಊರಿನಲ್ಲಿ ವೀರದಾಸ ನೆಂಬವನು ದೊಡ್ಡ ಧನಿಕನಾಗಿದ್ದನು. ಆದುದರಿಂದ ಅವನು ಬಡ್ಡೀ ಲೇವಾದೇವಿ ನಡೆಸುತ್ತ ಎಲ್ಲರಿಗೂ ಬೇಕಾದವನಾಗಿದ್ದನು. ಹಣದ ಅಗತ್ಯವಿದ್ದವರು ಅವನ ಬಳಿಗೆ ಬಂದು, ಸಾಲವಾಗಿ ಹಣ ಪಡೆದು ಅವನು ಕೇಳುವ ನ್ಯಾಯವಾದ ಬಡ್ಡಿಯನ್ನು ಕೊಡುತ್ತಿದ್ದರು. ವೀರದಾಸನೂ ಅನ್ಯಾಯದ ಬಡ್ಡಿಯ ಆಶೆಗೆ ಹೋಗುತ್ತಿರಲಿಲ್ಲ. ಆದರಿಂದಾಗಿ ಗ್ರಾಮದೊಳಗಿನ ಅನೇಕರು ತಮ್ಮ ವಿಶೇಷ ಖರ್ಚುಗಳಿಗೆ ಅವನನ್ನೇ ನಂಬಿಕೊಳ್ಳುತ್ತಿದ್ದರು. ತೆಗೆದುಕೊಂಡ ಸಾಲವನ್ನು ಅನುಕೂಲವಾದಂತೆ ಸ್ವಲ್ಪ ಸ್ವಲ್ಪವಾಗಿ ಹಿಂದೆ ಕೊಡುವ ಏರ್ಪಾಡಿಗೂ ವೀರದಾಸನು ಒಪ್ಪುತ್ತಿದ್ದನು.

ದೇವನಹಳ್ಳಿಯ ಪಕ್ಕದಲ್ಲಿದ್ದ ಗ್ರಾಮದಲ್ಲಿ ನಾಗಭೂಷಣನೆಂಬ ಸಾಹುಕಾರನಿದ್ದನು. ಅವನಿಗೆ ತಂದೆ ತಾತಂದಿರು ಸಂಪಾದಿಸಿ ಬಿಟ್ಟುಹೋದ ಭಾರೀ ಆಸ್ತಿ ಇದ್ದರೂ, ಇನ್ನಿಷ್ಟು ಸಂಪಾದಿಸಬೇಕೆಂಬ ಆಶೆಯಿಂದ ಅಗತ್ಯವಿದ್ದವರಿಗೆ ಸಾಲ ಕೊಟ್ಟು, ಅಧಿಕ ಬಡ್ಡಿ ವಸೂಲು ಮಾಡಲು ಪ್ರಯತ್ನಿಸುತ್ತಿದ್ದನು. ಆದರೆ ಅವನ ಕೈಯಿಂದ ಸಾಲ ತೆಗೆದುಕೊಂಡವರು ಹೇಳಿದ ಹಾಗೆ ಹಿಂದೆ ಕೊಡುತ್ತಿದ್ದಿಲ್ಲ. ಬಡ್ಡಿ ಕೊಡಲಿಕ್ಕೆ ಕೂಡಾ ಅವನನ್ನು ಅನೇಕ ಬಾರಿ ತಿರುಗಾಡಿಸಿ ದಣಿಸುತ್ತಿದ್ದರು.

ಆ ಕಾರಣದಿಂದ ನಾಗಭೂಷಣನು ತನ್ನ ಸಾಲದ ವಸೂಲಿಗಾಗಿ ಕೆಲವು ಮಂದಿ ಪೊಗರಿನ ಬಂಟರ ಸಹಾಯ ಕೇಳಬೇಕಾಗಿ ಬರುತ್ತಿತ್ತು. ಅದಕ್ಕಾಗಿ ಸ್ವಲ್ಪ ಧನವನ್ನು ಕೂಡ ಖರ್ಚು ಮಾಡಬೇಕಾಗಿ ಬರುತ್ತಿತ್ತು. ಅದರಿಂದ ಬೇರೆ ಗೊಡವೆಗಳೂ ತೊಂದರೆಗಳೂ ಅವನಿಗೆ ಬರುತ್ತಿದ್ದುವು.

ನಾಗಭೂಷಣನು ವೀರದಾಸನ ವಿಷಯವನ್ನು ಕೇಳಿದ್ದನು. ಒಂದು ದಿನ ಅವನು ಅವನನ್ನು ನೋಡಲಿಕ್ಕಾಗಿಯೇ ದೇವನಹಳ್ಳಿಗೆ ಬಂದು ವೀರದಾಸನ ಮನೆಗೆ ಹೋದನು. ಸ್ವಾಗತೋಪಚಾರಗಳಾದ ಮೇಲೆ ಅದೂ ಇದೂ ಮಾತಾಡುತ್ತ, "ವೀರದಾಸರೇ, ನೀವು ಕೂಡಾ ಬಡ್ಡಿ ಲೇವಾದೇವಿ ನಡೆಸುವಿರಷ್ಟೇ ? ನೀವು ಕೊಟ್ಟ ಸಾಲವನ್ನು ಹೇಗೆ ವಸೂಲು ಮಾಡುವಿರಿ? " ಎಂದು ನಾಗಭೂಷಣನು ವೀರದಾಸನನ್ನು ಕೇಳಿದನು.

ಡಿ. ವಿ. ರಾವ್



ಅದಕ್ಕೆ ವೀರದಾಸನು "ನಾನು ವಸೂಲು ಮಾಡುವುದು ಎಂಬ ಪ್ರಸಕ್ತಿಯೇ ಬರುವುದಿಲ್ಲ. ನನ್ನಿಂದ ಸಾಲ ಪಡೆದುಕೊಂಡವರು ಅವರಷ್ಟಕ್ಕೆ ಅವರೇ ಬಂದು ಬಾಕಿ ಕೊಟ್ಟು ಹೋಗುತ್ತಾರೆ. ಅದರಲ್ಲಿ ಅಂಥ ವಿಶೇಷವೇನಿದೆ ? " ಎಂದನು.

"ಆದರೂ ಎಲ್ಲರೂ ಒಂದೇ ರೀತಿ ಇರಲಾರರಷ್ಟೆ? ಕೆಲವರು ಮೊಂಡುತನದವರಿದ್ದೇ ಇರುತ್ತಾರಲ್ಲ ? ಅವರಿಂದ ಹೇಗೆ ವಸೂಲು ಮಾಡುವಿರಿ ? " ಎಂದು ಕೇಳಿದನು ನಾಗಭೂಷಣ.

" ಎಂತಹ ಮೊಂಡುಗಾರರಾದರೂ ಸರಿಯೆ. ನನಗೆ ವಸೂಲು ಆಗಿಬಿಡುತ್ತದೆ. ಅಸಲು ನನ್ನ ಹತ್ತಿರ ಯಾರೂ ಮೊಂಡುತನ ತೋರಿಸುವುದಿಲ್ಲ. ನನಗೆ ಅಂಥ ಅನುಭವ ಆಗಿರಲಿಲ್ಲ. ಆಗದಿರುವುದನ್ನು ಹೇಗೆ ಹೇಳಲಿ ? " ಎಂದನು ವೀರದಾಸ.

ನಾಗಭೂಷಣನು ಸ್ವಲ್ಪಹೊತ್ತು ಆಲೋಚಿಸುತ್ತಾ ಸುಮ್ಮನಿದ್ದು, ಆಮೇಲೆ " ಹಾಗಾದರೆ ನಾನು ನಿಮ್ಮ ಹತ್ತಿರ ಇನ್ನೂರು ರೂಪಾಯಿ ಸಾಲ ತೆಗೆದು ಕೊಳ್ಳುತ್ತೇನೆ. ಆ ಮೊತ್ತವನ್ನು ಆರು ತಿಂಗಳೊಳಗೆ ನೀವು ವಸೂಲು ಮಾಡಿಕೊಳ್ಳಬೇಕು. ಸಾವಿರ ರೂಪಾಯಿ ಪಂದ್ಯ ಕಟ್ಟುತ್ತೇನೆ ! ಒಪ್ಪುವಿರಾ ? "

ಆ ಮಾತು ಕೇಳಿ ವೀರದಾಸನು ಸಣ್ಣಗೆ ನಕ್ಕು,

" ನಿಮ್ಮನ್ನು ಕುರಿತು ನಾನು ಕೇಳಿದ್ದೇನೆ. ಆದರೂ ನನಗೊಂದು ನಿಯಮವಿದೆ. ನಮ್ಮ ಗ್ರಾಮದ ಹೊರಗಿನವರಿಗೆ ಸಾಲ ಕೊಡುವಾಗ ಅವರಿಂದ ಏನಾದರೂ ವಸ್ತುವನ್ನು ಅಡವು ತೆಗೆದುಕೊಳ್ಳು ತ್ತೇನೆ. ಹಾಗೆ ನೀವೂ ಅಡವಿನ ವಸ್ತು ಕೊಡ ಬೇಕು " ಎಂದನು.

" ಹಾಗೆಯೇ ಮಾಡಿರಿ. ಆದರೆ ಒಂದು ಷರತ್ತು. ನಿಮ್ಮ ಸಾಲ ವಸೂಲಾದ ತತ್ಕ್ಷಣದಲ್ಲಿ ಆ ಅಡವಿನ ವಸ್ತುವನ್ನು ನನಗೆ ಕೊಟ್ಟುಬಿಡಬೇಕು. ಎಂದು ನಾಗಭೂಷಣನು ತನ್ನ ಕೈಯಲ್ಲಿದ್ದ ಬಂಗಾರದ ಕಂಕಣವನ್ನು ವೀರದಾಸನಿಗೆ ಕೊಟ್ಟು, " ಆರು ತಿಂಗಳೊಳಗೆ ನನ್ನಿಂದ ನಿಮ್ಮ ಸಾಲವನ್ನು ವಸೂಲು ಮಾಡಬೇಕು. ಅಷ್ಟೇ ಹೊರತು ಸಾಲದ ಬಾಕಿ ಗಾಗಿ ನನ್ನ ಅಡವಿನ ವಸ್ತುವನ್ನು ಮಾರಿ ಜಮಾ ಮಾಡಿಕೊಳ್ಳಕೂಡದು. ನೀವು ಅಡವು ತೆಗೆದು ಕೊಳ್ಳುವುದರಿಂದ ಈ ಶರತ ಹೇಳುತ್ತೇನೆ. ಇದಕ್ಕೆ ನೀವು ಒಪ್ಪುವಿರಿ ತಾನೇ ? " ಎಂದನು.

" ಹಾಗೆಯೇ ಆಗಲಿ " ಎಂದು ವೀರದಾಸನು ನಾಗಭೂಷಣನಿಗೆ ಇನ್ನೂರು ರೂಪಾಯಿಗಳನ್ನು ಕೊಟ್ಟನು.

ಅಂದಿನಿಂದ ನಾಗಭೂಷಣನು ವೀರದಾಸನು ತನ್ನ ಸಾಲವನ್ನು ಹೇಗೆ ವಸೂಲು ಮಾಡುತ್ತಾನೋ ಎಂದುಕೊಂಡು, ತಕ್ಕ ಜಾಗರೂಕತೆಯಿಂದ ದಿನ ಗಳನ್ನು ನೋಡುತ್ತಿದ್ದನು.

ಆರು ತಿಂಗಳು ಕಳೆದುಹೋಯಿತು, ವೀರದಾಸನು ನಾಗಭೂಷಣನಿಗೆ ಸಾಲದ ಸುದ್ದಿ ತಿಳಿಸದೆ

ಸುಮ್ಮನೆಯೇ ಇದ್ದನು. ನಾಗಭೂಷಣನು ತಾನು ಪಂದ್ಯದಲ್ಲಿ ಗೆದ್ದುಬಿಟ್ಟೆನೆಂದು ಸಂತೋಷಿಸುತ್ತ ಒಂದು ದಿನ ವೀರದಾಸನನ್ನು ನೋಡಲು ಬಂದನು.

ವೀರದಾಸನು ನಾಗಭೂಷಣನನ್ನು ನೋಡಿದ ಕೂಡಲೇ "ಪಂದ್ಯದ ಹಣ ತಂದಿದ್ದೀರಾ ?" ಎಂದು ಕೇಳಿದನು.

ನಾಗಭೂಷಣನು ಆಶ್ಚರ್ಯಪಡುತ್ತ, "ನಾನು ಪಂದ್ಯದ ಹಣ ತರುವುದೆಂದರೇನು ? ನೀವು ನನ್ನಿಂದ ನಿಮ್ಮ ಸಾಲ ವಸೂಲು ಮಾಡಬೇಕಲ್ಲವೆ ? ಪಂದ್ಯದಲ್ಲಿ ಗೆದ್ದವನು ನಾನು !" ಎಂದನು.

ವೀರದಾಸನು ನಕ್ಕು, "ನಿಮ್ಮ ಸಾಲ ವಸೂಲು ಆಗಲಿಲ್ಲವೆಂದರೇನು ? ಸುಮ್ಮನೆ ಪಂದ್ಯದ ಹಣ ಕೇಳುವೆನೆಂದುಕೊಂಡಿರಾ ? ಸಾಲದ ಮೊತ್ತವನ್ನು ಎಂದೋ ವಸೂಲು ಮಾಡಿಕೊಂಡಿದ್ದೇನೆ !" ಎಂದನು.

"ನಿಮ್ಮದು ಸುಳ್ಳು ಮಾತು. ನೀವು ವಸೂಲು ಮಾಡಿದ್ದೀರಿ ಎಂಬುದಕ್ಕೆ ಆಧಾರವೇನಿದೆ ? ಬರಿ ಮಾತನ್ನು ನಂಬುವೆನೆಂದುಕೊಂಡಿರೇನು ? ಪಂದ್ಯದ ಹಣವನ್ನು ಹಾರಿಸಿಕೊಳ್ಳಲಿಕ್ಕೆ ನೀವು ಹೀಗೆ ಸುಳ್ಳು ಹೇಳುತ್ತೀರಿ" ಎಂದನು ನಾಗಭೂಷಣ ತುಸು ಕೋಪದಿಂದ.

"ನನಗೆ ಸುಳ್ಳು ಹೇಳುವ ಅಗತ್ಯವೇ ಇಲ್ಲ" ಎಂದು ವೀರದಾಸನು ಒಬ್ಬ ನೌಕರನನ್ನು ಕೂಗಿ ಕರೆದು, ಅವನಿಗೆ ನಾಗಭೂಷಣನನ್ನು ತೋರಿಸಿ, "ಇವರನ್ನು ನೀನು ಬಲ್ಲೆಯಾ ?" ಎಂದು ಕೇಳಿದನು.

ಆ ನೌಕರನನ್ನು ನೋಡಿದ ಕೂಡಲೇ ನಾಗಭೂಷಣನಿಗೆ ಎಲ್ಲಾ ಸಂಗತಿಯೂ ಅರ್ಥವಾಯಿತು. ಅದೇನೆಂದರೆ,

ನಾಲ್ಕು ತಿಂಗಳ ಕೆಳಗೆ ಒಂದು ದಿನ ರಾತ್ರಿ ವಿಪರೀತವಾಗಿ ಮಳೆ ಬರುತ್ತಾ ಇತ್ತು. ನಾಗಭೂಷಣನು ಆಗತಾನೇ ಊಟ ಮುಗಿಸಿ ಜಗಲಿಗೆ



ಬಂದನು. ಆ ಸಮಯದಲ್ಲಿ ಒಬ್ಬ ವ್ಯಕ್ತಿ ಮಳೆಯಲ್ಲಿ ನೆನೆಯುತ್ತ ಅವನ ಹತ್ತಿರ ಬಂದು, "ಅಯ್ಯಾ, ತಾವೇ ನನ್ನನ್ನು ಕಾಪಾಡಬೇಕು. ನನ್ನ ಹೆಂಡತಿ ಸಾವು ಬದುಕಿನ ನಡುವೆ ನರಳುತ್ತಿದ್ದಾಳೆ. ಕೂಡಲೇ ಪಟ್ಟಣಕ್ಕೆ ಒಯ್ದು ಚಿಕಿತ್ಸೆ ಮಾಡಬೇಕಾಗಿದೆ. ಬರೇ ಇನ್ನೂರು ರೂಪಾಯಿ ಸಾಲ ಬೇಕಿತ್ತು ಸ್ವಾಮಿ ! ದಯಮಾಡಿ ಸ್ವಾಮಿ ! ನಿಮ್ಮ ಪುಣ್ಯ !" ಎಂದು ಬೇಡಿದನು.

ನಾಗಭೂಷಣನು ಅವನನ್ನು ಬೇಸರದಿಂದ ನೋಡಿ, "ಚೆನ್ನಾಗಿದೆಯಲ್ಲಾ ನೀನು ಕೇಳೋದು ! ನೀನಾರೋ ಯಾವ ಊರಿನವನೋ ನನಗೇನು ಗೊತ್ತು ! ಹೇಗೆ ಸಾಲ ಕೊಡುವುದು ? ಏನಾದರೂ ಅಡವಿನ ವಸ್ತು ತೆಗೆದುಕೊಂಡು ಬಾ" ಎಂದನು.

"ತಂದಿದ್ದೇನೆ ಸಾಮಿ !" ಎಂದು ಆ ವ್ಯಕ್ತಿ ತನ್ನ ಸೊಂಟದ ಗಂಟಿನಿಂದ ಬಂಗಾರದ ಬಳೆಯನ್ನು ಹೊರಗೆ ತೆಗೆದು "ಇದು ನನ್ನ ಹೆಂಡತೀದು.



ಇದನ್ನು ಅಡವು ಇಟ್ಟುಕೊಂಡು ಬೇಗ ಹಣ ದಯ ಮಾಡಿ ಸ್ವಾಮಿ !" ಎಂದನು.

ಬಂಗಾರದ ಬಳೆಯನ್ನು ನೋಡಿದ ಕೂಡಲೇ ನಾಗಭೂಷಣನ ಕಣ್ಣುಗಳು ಹೊಳಪಾದುವು. ಅವನು ಕೂಡಲೇ ಪತ್ರ ಬರೆದು ಆ ವ್ಯಕ್ತಿಯ ಹೆಬ್ಬೆರಳು ಮುದ್ರೆ ಒತ್ತಿಸಿಕೊಂಡು, ಬಂಗಾರದ ಬಳೆಯನ್ನು ಪಡೆದು, ಇನ್ನೂರು ರೂಪಾಯಿ ಅವನಿಗೆ ಕೊಟ್ಟನು.

ಹೀಗೆ ವೀರದಾಸನು ನಾಗಭೂಷಣನಿಂದ ಸಾಲ ವಸೂಲು ಮಾಡಿಕೊಂಡಿದ್ದನು.

ಇದನ್ನು ತಿಳಿದು ನಾಗಭೂಷಣನು ತೀವ್ರ ಸ್ವರ ದಿಂದ, "ನೀವು ಮಾಡಿದ್ದು ಹಸಿ ಹಸೀ ಮೋಸ. ಹೇಳಿಕೊಂಡ ಷರತ್ತು ಪ್ರಕಾರ ನಾನು ಕೊಟ್ಟ ಅಡವಿನ ವಸ್ತುವನ್ನು ನಿಮ್ಮ ಸಾಲ ವಸೂಲಾದ ಆದೇ ಕ್ಷಣದಲ್ಲಿ ನನಗೆ ಕೊಡಬೇಕಿತ್ತು" ಎಂದನು.

"ಇದರಲ್ಲಿ ಯಾವ ಮೋಸವೂ ಇಲ್ಲ. ಆ ರಾತ್ರಿ ಯಲ್ಲಿ ನನ್ನ ನೌಕರನು ನಿಮಗೆ ಅಡವು ಅಂತ ಕೊಟ್ಟಿದ್ದು ನೀವು ನನ್ನ ಹತ್ತಿರ ಕೊಟ್ಟ ಕಂಕಣವನ್ನೇ. ನೀವು ಕೊಟ್ಟ ಕಂಕಣವನ್ನು ಕರಗಿಸಿ ಮಾಡಿಸಿದ್ದು. ಬೇಕಾದರೆ ತೂಕಮಾಡಿ ನೋಡಿಕೊಳ್ಳಿ. ನನಗೆ ನೀವು ಬಡ್ಡಿ ಕೊಡಬೇಕಾದ ಅಗತ್ಯವೇನಿಲ್ಲ. ಆ ಹಣದಿಂದ ಬಳೆಯನ್ನು ಕರಗಿಸಿ ನಿಮ್ಮ ಕಂಕಣವನ್ನೇ ಮಾಡಿಸಿ ಕೊಳ್ಳಿರಿ" ಎಂದನು ವೀರದಾಸ.

ಪಂದ್ಯದ ಸಾವಿರ ರೂಪಾಯಿಯನ್ನು ವೀರ ದಾಸನಿಗೆ ಕೊಡಲು ನಾಗಭೂಷಣನಿಗೆ ಇಷ್ಟವಿರ ಲಿಲ್ಲ. ಅವನು ಸ್ವಲ್ಪ ಆಲೋಚನೆಮಾಡಿ, "ನಾನು ನಿಮಗೆ ಕೊಡಲಿರುವ ಪಂದ್ಯ ಗೆದ್ದ ಸಾವಿರ ರೂಪಾಯಿಯನ್ನು ಹೇಗೆ ವಸೂಲು ಮಾಡುವಿರೋ ಮಾಡಿಕೊಳ್ಳಿ !" ಎಂದನು ಮೊಂಡುತನದಿಂದ.

ಅದನ್ನು ಕೇಳಿ ವೀರದಾಸನು ಗಹಗಹಿಸಿ ನಗುತ್ತ "ನೀವು ಹೀಗೆ ಪೇಚಿಗೆ ಹಾಕುವ ಸಂಭವ ಇದೆ ಯೆಂದು ಮೊದಲೇ ಊಹಿಸಿದ್ದೇನೆ. ಸುಮಾರು ಎರಡು ಸಾವಿರ ಬೆಲೆ ಬಾಳುವ ನಿಮ್ಮ ಕಂಕಣವು ನನ್ನ ಹತ್ತಿರವೇ ಇದೆ ಸ್ವಾಮಿ. ನಿಮಗೆ ನನ್ನ ನೌಕರನು ಕೊಟ್ಟ ಬಳೆ ಪೂರ್ತಿ ಬಂಗಾರದ್ದಲ್ಲ. ತಾಮ್ರದ ಬಳೆಗೆ ಹೆಚ್ಚು ದಪ್ಪವಾಗಿ ಬಂಗಾರದ ಲೇಪ ಮಾಡಿಸಿದ್ದು. ನನಗೆ ಬೇಕಾದುದು ಪಂದ್ಯದ ಹಣ ಸಾವಿರ ರೂಪಾಯಿ ಮಾತ್ರವೇ. ನನ್ನ ನೌಕರನು ನಿಮಗೆ ಕೊಟ್ಟ ನಕಲೀ ಬಳೆಯನ್ನು ನನಗೆ ತಂದುಕೊಟ್ಟು ನಿಮ್ಮ ಕಂಕಣವನ್ನು ತೆಗೆದು ಕೊಂಡು ಹೋಗಿ" ಎಂದು ನೌಕರನಿಂದ ಕಂಕಣ ವನ್ನು ತರಿಸಿ ನಾಗಭೂಷಣನಿಗೆ ತೋರಿಸಿದನು.

ನಾಗಭೂಷಣನು ಅಪ್ರತಿಭನಾಗಿ ಸಾವಿರ ರೂಪಾಯಿಗಳನ್ನು ವೀರದಾಸನಿಗೆ ಕೊಟ್ಟು, ಅವನ ನೌಕರನು ಅಡವಿಟ್ಟ ಬಳೆಯನ್ನೂ ಕೊಟ್ಟು, ಹೊರಡ ಲಿರುವಾಗ ಅವನಿಗೊಂದು ಆಲೋಚನೆ ಬಂತು.

"ನೀವು ನನಗೆ ಸಾಲ ಕೊಡುವ ದಿನ ಮೊದಲು ಹೇಳಿದ ಮಾತಿನ ಪ್ರಕಾರ ಆ ಹಣ

ವಸೂಲು ಮಾಡಿಕೊಳ್ಳುವ ಮೊದಲು ನನ್ನ ಅಡವಿನ ವಸ್ತು ಕೊಡುತ್ತೇನೆಂದಿದ್ದೀರಿ. ಆದರೆ ನೀವು ನನಗೆ ನಕಲೀ ಬಳೆ ಕೊಟ್ಟು ಮಾತು ತಪ್ಪಿದಿರಿ" ಎಂದನು.

"ಇದರಲ್ಲಿ ನಾನು ಮಾತು ತಪ್ಪಿದ್ದು ಏನೂ ಇಲ್ಲ" ಎಂದು ವೀರದಾಸನು, ಮುಗುಳುನಗುತ್ತ, "ಅಯ್ಯಾ ನಾಗಭೂಷಣರೇ, ನೀವು ಒಳ್ಳೆಯ ಬುದ್ಧಿವಂತರೆಂದು ನನಗೆ ಗೊತ್ತಿದೆ. ಅಂತಹ ನಿಮ್ಮಿಂದ ಪಂದ್ಯದ ಹಣವನ್ನೂ, ನನ್ನ ಸಾಲವನ್ನೂ ವಸೂಲು ಮಾಡಿಕೊಳ್ಳಬೇಕಾದರೆ ನಿಮ್ಮನ್ನು ಸ್ವಲ್ಪ ಗಲಿಬಿಲಿಗೊಳಿಸಬೇಕೆಂದು ತಿಳಿದು ಹೀಗೆಲ್ಲಾ ಹೇಳಿದೆ. ನಿಮಗೆ ನನ್ನ ನೌಕರನ ಕೈಯಲ್ಲಿ ಕಳುಹಿಸಿಕೊಟ್ಟದ್ದು ನಕಲೀ ಬಳೆಯಲ್ಲ. ಸ್ವಚ್ಛವಾದ ಬಂಗಾರದ್ದೇ. ಅಷ್ಟೇ ಅಲ್ಲ. ಅದು ನೀವು ಕೊಟ್ಟ ಕಂಕಣಕ್ಕೆ ಸರಿಯಾದ ತೂಕದ್ದೇ ಆಗಿದೆ. ಅಂದರೆ ರೂಪ ಬದಲಾವಣೆಯಾದರೂ ನನ್ನ ಸಾಲ ವಸೂಲು ಮಾಡುವ ಮೊದಲು ಹೇಳಿದ ಮಾತಿನ ಪ್ರಕಾರ ನಿಮ್ಮ ವಸ್ತುವನ್ನು ನಿಮಗೆ ಒಪ್ಪಿಸಿದ್ದೇನೆ. ಒಪ್ಪುವಿರಷ್ಟೆ ?" ಎಂದನು.

"ಇಷ್ಟು ವಿವರವಾಗಿ ಹೇಳಿದ ಮೇಲೆ ಕೂಡಾ ನೀವು ಮಾತು ತಪ್ಪಿದಿರಿ ಎಂಬಷ್ಟು ಬುದ್ಧಿಗೆಟ್ಟವನು ನಾನಲ್ಲ. ಆದರೆ ಬಡ್ಡಿಗೆ ಸಾಲ ಕೊಟ್ಟದ್ದನ್ನು ವಸೂಲು ಮಾಡುವ ಪದ್ಧತಿಯನ್ನು ಕುರಿತು ನಿಮ್ಮಿಂದ ತುಂಬಾ ಕಲಿಯಬೇಕೆಂದಿದೆ" ಎಂದು ಹೇಳಿ ನಾಗಭೂಷಣನು ಎದ್ದನು.

ವೀರದಾಸನು ನಾಗಭೂಷಣನನ್ನು ಸ್ವಲ್ಪ ನಿಲ್ಲುವಂತೆ ಹೇಳಿ, "ನಾವು ಸಾಲ ಕೊಡುವ ಹಣವನ್ನು ವಸೂಲು ಮಾಡಿಕೊಳ್ಳುವ ವಿಷಯದಲ್ಲಿ ಪದ್ಧತಿಯೋ, ಪಥಕವೋ ಹಾಗೇನೂ ಇಲ್ಲ. ಆಗತ್ಯಬಿದ್ದು ಸಾಲ ತೆಗೆಯಲು ಬಂದವರಿಂದ ಸಾಧ್ಯವಾದಷ್ಟು ಹೆಚ್ಚು ಬಡ್ಡಿ ಬರಮಾಡಿಕೊಳ್ಳಬೇಕೆಂಧು ನಾವು ದುರಾಶೆಗೆ ಹೋದರೆ. ತೊಂದರೆಗಳು ಪ್ರಾರಂಭವಾಗುತ್ತವೆ, ನಾವು ನ್ಯಾಯವಾದ ಬಡ್ಡಿಗೆ ಸಾಲ ಕೊಟ್ಟಾಗ ತೆಗೆದುಕೊಂಡವನ ಮನಸ್ಸಿನಲ್ಲಿ ಕೃತಜ್ಞತಾಭಾವ ಹುಟ್ಟಿರುತ್ತದೆ. ಆ ಕಾರಣದಿಂದ ನಮಗೆ ಬರಬೇಕಾದುದು ತನ್ನಂತೆ ಬರುತ್ತದೆ. ನಾವು ವಸೂಲು ಮಾಡುವುದು ಎಂಬ ಪ್ರಶ್ನೆಗೇ ತಾವಿಲ್ಲ" ಎಂದನು.

"ವೀರದಾಸರೇ, ಇದೆಲ್ಲಾ ನೀವು ಅನುಭವಪೂರ್ವಕವಾಗಿ ತಿಳಿದುಕೊಂಡಿದ್ದೀರೆಂದು ತಿಳಿಯಿತು. ಇನ್ನು ಮೇಲೆ ನಾನೂ ನಿಮ್ಮ ದಾರಿಯನ್ನೇ ಅನುಸರಿಸಬೇಕೆಂದಿದ್ದೇನೆ. ನಿಮ್ಮಿಂದ ನಿಜಕ್ಕೂ ಉಪಕಾರವಾಯಿತು ಸ್ವಾಮಿ" ಎಂದು ನಮಸ್ಕಾರ ಮಾಡಿ ಹೊರಟುಹೋದನು ನಾಗಭೂಷಣ.



# ಅಹಂಕಾರಿ

ವೃದ್ಧನಾಗಿದ್ದ ಒಬ್ಬ ರಾಜನು ಕೆಲವು ಟೀಕಾತಾತ್ಪರ್ಯ ಗ್ರಂಥಗಳ ಸಹಾಯದಿಂದ ಭಗವದ್ಗೀತೆಯನ್ನು ಓದಿಕೊಂಡು, ಅದನ್ನು ಪದ್ಯ ರೂಪದಲ್ಲಿ ಬರೆದನು. ಆ ಕೆಲಸ ಮುಗಿದ ಕೂಡಲೇ ಅವನಿಗೆ ತನ್ನಷ್ಟು ದೊಡ್ಡ ಕವಿ ಯಾರೂ ಇಲ್ಲವೆಂದು ಅಹಂಕಾರ ಬಂತು. ರಾಜ್ಯದಲ್ಲೆಲ್ಲಾ ದೊಡ್ಡ ಕವಿ ಪಂಡಿತನೆಂದು ಹೆಸರಾಂತ ವಿಷ್ಣುಶರ್ಮನಿಗೆ, ತನ್ನೊಂದಿಗೆ ಸರಿತೂಗುವಂತಹ ಕವಿಯನ್ನು ಕಳುಹಿಸಿಕೊಡುವಂತೆ ಆದೇಶ ಮಾಡಿದನು ಆ ರಾಜ.

ವಿಷ್ಣುಶರ್ಮನು ಒಬ್ಬ ಯುವಕನನ್ನು ರಾಜನ ಬಳಿಗೆ ಕಳುಹಿಸಿದನು.

ರಾಜನು ಅವನೊಂದಿಗೆ, "ನೀನೇನೋ ಪುಟ್ಟ ಕವಿಯಾಗಿರಬಹುದು. ಆದರೆ ನಿನ್ನ ಪ್ರಾಯವು ಮಹಾಕವಿಯಾಗಲು ಸಾಲದು. ಭಗವದ್ಗೀತೆ ನನ್ನಂಥವನಿಗೇ ಅರ್ಥವಾಗದೆ ಟೀಕಾತಾತ್ಪರ್ಯಗಳ ಸಹಾಯದಿಂದ ಅರ್ಥಮಾಡಿಕೊಳ್ಳಬೇಕಾಯಿತು. ಪದ್ಯ ರೂಪದಲ್ಲಿರುವ ನನ್ನ ಕವಿತ್ವ ನಿನಗೇನು ಅರ್ಥವಾದೀತು? ಹೋಗಿ ನಿನ್ನ ಗುರುವನ್ನೇ ಕಳುಹಿಸು" ಎಂದನು ಬೇಸರದಿಂದ.

ಕೆಲವು ದಿನಗಳ ಮೇಲೆ ವಿಷ್ಣುಶರ್ಮನು ಸ್ವತಃ ರಾಜನ ಬಳಿಗೆ ಬಂದನು. ರಾಜನು ಅವನೊಂದಿಗೆ, ಆ ಯುವಕ ಕವಿಯನ್ನು ಕುರಿತು ಹೇಳಲು, "ಮಹಾರಾಜರೇ, ನೀವು ಭಗವದ್ಗೀತೆಯನ್ನು ಅರ್ಥಮಾಡಿಕೊಳ್ಳಲು ಓದಿದ ಟೀಕಾತಾತ್ಪರ್ಯ ಗ್ರಂಥಗಳನ್ನು ನಾನು ತಾನೇ ಕೊಟ್ಟಿದ್ದೇನೆ? ಅದನ್ನು ಬರೆದವನು ಆ ಹುಡುಗನೇ" ಎಂದನು ವಿಷ್ಣುಶರ್ಮ.

ರಾಜನು ಅಪ್ರತಿಭನಾಗಿ "ಮತ್ತೆ ಆ ಯುವಕನು ಆ ಸಂಗತಿ ನನ್ನ ಹತ್ತಿರ ಹೇಳಲೇ ಇಲ್ಲವೇಕೆ? ಅವನು ಅಷ್ಟು ದೊಡ್ಡ ಕವಿಯೇ?" ಎಂದನು.

ಅದಕ್ಕೆ ವಿಷ್ಣುಶರ್ಮನು, "ನಿಜವಾದ ಕವಿಯೂ ಪಂಡಿತನೂ ಆದವನು ತನ್ನನ್ನು ಕುರಿತು ದೊಡ್ಡದಾಗಿ ಹೇಳುವುದಿಲ್ಲ ಮಹಾರಾಜರೇ" ಎಂದನು.

ಆ ಮಾತು ವೃದ್ಧರಾಜನಲ್ಲಿದ್ದ ಅಹಂಕಾರವನ್ನು ಗುಡಿಸಿ ಬಿಸುಟು ಬಿಟ್ಟಿತು.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

### ಗೆದ್ದ ಶೀರ್ಷಿಕೆಗಳು ೧೯೮೬ ಜುಲೈ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



Mrs. S. Radha



K. P. A. Swamy

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಮೇ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಮಾರ್ಚಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ತನ್ನತನವಿದೆಯೆಂಬ ಹಿಗ್ಗು

ಎರಡನೇ ಫೋಟೋ : ಅನ್ಯರ ಪ್ರಿಯದಿಂದ ಬಂದ ಕುಗ್ಗು

ಕಳುಹಿಸಿದವರು : ಪಿ. ಶೋಭಾ, ಚಂಪಕವನ, ಕಿನ್ನಿಗೋಳಿ, ದ. ಕ.

ಬಹುಮಾನ ರೂ. ೫೦/– ಈ ತಿಂಗಳ ಅಖೈರಿನೊಳಗೆ ಕಳುಹಿಸಲಾಗುವುದು

Printed by B.V. REDDI at Prasad Process Private Ltd., 188 N.S.K. Salai, Madras 600 026 (India) and Published by B. VISWANATHA REDDI on behalf of CHANDAMAMA PUBLICATIONS, Chandamama Buildings, Vadapalani, Madras 600 026 (India). Controlling Editor: NAGI REDDI.